**ಪೊಲೀಸ್ ಇಲಾಖೆ**

**ಉಪ ಪೊಲೀಸ್ ಆಯುಕ್ತರವರ ಕಛೇರಿ,**

**ನಗರ ಸಶಸ್ತ್ರ ಮೀಸಲು ಪಡೆ (ಕೇಂದ್ರ), ಮೈಸೂರು ರಸ್ತೆ, ಬೆಂಗಳೂರು-18**

**ಅಧಿಸೂಚನೆ ಸಂಖ್ಯೆ.ಎಂಟಿಸಿ(1)/10/2005-06, ದಿನಾಂಕ: 07ನೇ ಜೂನ್ 2006**

**ವಿಷಯ:** ನಿರುಪಯುಕ್ತ ವಿವಿಧ ಮಾಧರಿಯ 61 ಸಂಖ್ಯೆಯ ಪೊಲೀಸ್ ವಾಹನಗಳನ್ನು ಟೆಂಡರ್ / ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡುವ ಬಗ್ಗೆ ಸಾರ್ವಜನಿಕ ಪ್ರಕಟಣೆ

**ಉಲ್ಲೇಖ:** 1) ಸರ್ಕಾರಿ ಆದೇಶ ಸಂಖ್ಯೆ.ಸಿಆಸುಇ/142/ಶಿವಾನೀ/2000, ದಿನಾಂಕ: 05-01-2001 ಮತ್ತು ಎಫ್‌ಡಿ/6/ಟಿಸಿಇ/87, ದಿನಾಂಕ: 15-12-92

2) ಪ್ರಧಾನ ಕಛೇರಿ ಆದೇಶ ಸಂಖ್ಯೆ.ವಾಸಾ(1)11/2006-07, ದಿನಾಂಕ: 19-05-2006 ಮತ್ತು ಎಂಟಿ(1)37/2000-01, ವಾಲ್ಯೂಂ 1, ದಿನಾಂಕ: 23-09-2000

ಮೇಲಿನ ವಿಷಯ ಹಾಗೂ ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಸಾರ್ವಜನಿಕರಿಗೆ ಈ ಮೂಲಕ ತಿಳಿಯ ಪಡಿಸುವುದೇನೆಂದರೆ, ನಗರ ಸಶಸ್ತ್ರ ಮೀಸಲು ಪಡೆ (ಕೇಂದ್ರ), ಮೈಸೂರು ರಸ್ತೆ, ಬೆಂಗಳೂರು ನಗರ ಘಟಕದಲ್ಲಿರುವ ಈ ಕೆಳಗಿನ ವಿವಿಧ ಮಾದರಿಯ ಒಟ್ಟು 61 ಸಂಖ್ಯೆ ನಿರುಪಯುಕ್ತ ಪೊಲೀಸ್ ವಾಹನಗಳನ್ನು ವಿಲೇವಾರಿ ಮಾಡಲು ದಿನಾಂಕ: 10-07-2006ರ ಬೆಳಿಗ್ಗೆ 10-00 ಗಂಟೆಗೆ ಸರಿಯಾಗಿ ನಗರ ಸಶಸ್ತ್ರ ಮೀಸಲು ಪಡೆ (ಕೇಂದ್ರ) ಘಟಕದ ವಾಹನ ವಿಭಾಗದ ಆವರಣದಲ್ಲಿ ಟೆಂಡರ್ / ಬಹಿರಂಗ ಹರಾಜನ್ನು ಏರ್ಪಡಿಸಲಾಗಿದೆ. ಇಷ್ಟವುಳ್ಳ ಬಿಡ್‌ದಾರರು ಸದರಿ ಹರಾಜಿನಲ್ಲಿ ಭಾಗವಹಿಸುವುದರ ಮೂಲಕ ಅಥವಾ ಟೆಂಡರ್‌ಗಳನ್ನು ಸಲ್ಲಿಸುವುದರ ಮೂಲಕ ಈ ವಾಹನಗಳನ್ನು ಪಡೆಯಬಹುದಾಗಿರುತ್ತದೆ.

**ಹರಾಜು ಮಾಡಲು ಉದ್ದೇಶಿಸಿರುವ ನಿರುಪಯುಕ್ತ ಪೊಲೀಸ್ ವಾಹನಗಳ ವಿವರಣಾ ಪಟ್ಟಿ:-**

| ಕ್ರಮ ಸಂಖ್ಯೆ | ನೋಂದಣಿ ಸಂಖ್ಯೆ | ವಾಹನಗಳ ಮಾದರಿ | ತಯಾರಿಕೆ ವರ್ಷ |
|---|---|---|---|
| 1 | 2 | 3 | 4 |
| 1 | ಸಿ.ಎ.ಜಿ. 462 | ಅಂಬಾಸಿಡರ್ ಕಾರ್ | 1982 |
| 2 | ಸಿ.ಎ.ಜಿ. 636 | ಅಂಬಾಸಿಡರ್ ಕಾರ್ | 1983 |
| 3 | ಸಿ.ಎ.ಜಿ. 900 | ಅಂಬಾಸಿಡರ್ ಕಾರ್ | 1981 |
| 4 | ಸಿ.ಕೆ.ಜಿ. 401 | ಅಂಬಾಸಿಡರ್ ಕಾರ್ | 1986 |
| 5 | ಸಿ.ಎ.ಜಿ. 236 | ಅಂಬಾಸಿಡರ್ ಕಾರ್ | 1981 |
| 6 | ಸಿ.ಕೆ.ಜಿ. 403 | ಅಂಬಾಸಿಡರ್ ಕಾರ್ | 1986 |
| 7 | ಸಿ.ಎ.ಜಿ. 626 | ಮಹೇಂದ್ರ ಡೀಸಲ್ ಜೀಪ್ | 1983 |
| 8 | ಸಿ.ಎ.ಜಿ. 363 | ಮಹೇಂದ್ರ ಡೀಸಲ್ ಜೀಪ್ | 1982 |
| 9 | ಸಿ.ಎ.ಜಿ. 1702 | ಮಹೇಂದ್ರ ಡೀಸಲ್ ಜೀಪ್ | 1985 |
| 10 | ಸಿ.ಕೆ.ಜಿ. 1299 | ಮಹೇಂದ್ರ ಡೀಸಲ್ ಜೀಪ್ | 1989 |
| 11 | ಸಿ.ಎ.ಜಿ. 492 | ಮಹೇಂದ್ರ ಡೀಸಲ್ ಜೀಪ್ | 1982 |
| 12 | ಸಿ.ಎ.ಜಿ. 1674 | ಮಹೇಂದ್ರ ಡೀಸಲ್ ಜೀಪ್ | 1984 |
| 13 | ಸಿ.ಎ.ಜಿ. 628 | ಮಹೇಂದ್ರ ಡೀಸಲ್ ಜೀಪ್ | 1983 |
| 14 | ಸಿ.ಎ.ಜಿ. 360 | ಮಹೇಂದ್ರ ಡೀಸಲ್ ಜೀಪ್ | 1982 |
| 15 | ಸಿ.ಎ.ಜಿ. 364 | ಮಹೇಂದ್ರ ಡೀಸಲ್ ಜೀಪ್ | 1982 |
| 16 | ಸಿ.ಎ.ಜಿ. 1686 | ಮಹೇಂದ್ರ ಡೀಸಲ್ ಜೀಪ್ | 1984 |
| 17 | ಕೆಎ 01 ಜಿ 1992 | ಮಹೇಂದ್ರ ಡೀಸಲ್ ಜೀಪ್ | 1995 |
| 18 | ಸಿ.ಎ.ಜಿ. 629 | ಡೀಸಲ್ ಜೀಪ್ | 1982 |
| 19 | ಸಿ.ಎ.ಜಿ. 361 | ಡೀಸಲ್ ಜೀಪ್ | 1982 |
| 20 | ಸಿ.ಕೆ.ಜಿ. 53 | ಬುಲೆಟ್ ಮೋಟಾರ್ ಸೈಕಲ್ | 1986 |
| 21 | ಸಿ.ಕೆ.ಜಿ. 25 | ಯಜ್ಡಿ ಮೋಟಾರ್ ಸೈಕಲ್ | 1986 |
| 22 | ಸಿ.ಕೆ.ಜಿ. 30 | ಯಜ್ಡಿ ಮೋಟಾರ್ ಸೈಕಲ್ | 1986 |
| 23 | ಸಿ.ಕೆ.ಜಿ. 31 | ಯಜ್ಡಿ ಮೋಟಾರ್ ಸೈಕಲ್ | 1986 |
| 24 | ಸಿ.ಕೆ.ಜಿ. 239 | ಯಜ್ಡಿ ಮೋಟಾರ್ ಸೈಕಲ್ | 1986 |
| 25 | ಸಿ.ಕೆ.ಜಿ. 244 | ಯಜ್ಡಿ ಮೋಟಾರ್ ಸೈಕಲ್ | 1986 |
| 26 | ಸಿ.ಕೆ.ಜಿ. 184 | ಬುಲೆಟ್ ಮೋಟಾರ್ ಸೈಕಲ್ | 1986 |
| 27 | ಎಂ.ಇ.ಆರ್. 7647 | ಬುಲೆಟ್ ಮೋಟಾರ್ ಸೈಕಲ್ | 1979 |
| 28 | ಎಂ.ಇ.ಇ. 3945 | ಬುಲೆಟ್ ಮೋಟಾರ್ ಸೈಕಲ್ | 1976 |
| 29 | ಸಿ.ಎ.ಬಿ. 1365 | ಬುಲೆಟ್ ಮೋಟಾರ್ ಸೈಕಲ್ | 1980 |
| 30 | ಸಿ.ಎ.ಜಿ. 348 | ಬುಲೆಟ್ ಮೋಟಾರ್ ಸೈಕಲ್ | 1982 |
| 31 | ಸಿ.ಎ.ಜಿ. 598 | ಬುಲೆಟ್ ಮೋಟಾರ್ ಸೈಕಲ್ | 1983 |
| 32 | ಸಿ.ಎ.ಜಿ. 156 | ಬುಲೆಟ್ ಮೋಟಾರ್ ಸೈಕಲ್ | 1981 |

| 1 | 2 | 3 | 4 |
|---|---|---|---|
| 33 | ಸಿ.ಕೆ.ಜಿ. 339 | ಬುಲೆಟ್ ಮೋಟಾರ್ ಸೈಕಲ್ | 1982 |
| 34 | ಸಿ.ಕೆ.ಜಿ. 57 | ಬುಲೆಟ್ ಮೋಟಾರ್ ಸೈಕಲ್ | 1986 |
| 35 | ಎಂ.ಇ.ಆರ್. 7633 | ಬುಲೆಟ್ ಮೋಟಾರ್ ಸೈಕಲ್ | 1979 |
| 36 | ಎಂ.ಇ.ಜೆ. 9172 | ಬುಲೆಟ್ ಮೋಟಾರ್ ಸೈಕಲ್ | 1979 |
| 37 | ಎಂ.ಇ.ಜೆ. 9203 | ಬುಲೆಟ್ ಮೋಟಾರ್ ಸೈಕಲ್ | 1980 |
| 38 | ಎಂ.ಇ.ಜೆ. 9208 | ಬುಲೆಟ್ ಮೋಟಾರ್ ಸೈಕಲ್ | 1980 |
| 39 | ಎಂ.ಇ.ಜೆ. 9194 | ಬುಲೆಟ್ ಮೋಟಾರ್ ಸೈಕಲ್ | 1980 |
| 40 | ಎಂ.ಇ.ಜೆ. 9214 | ಬುಲೆಟ್ ಮೋಟಾರ್ ಸೈಕಲ್ | 1980 |
| 41 | ಎಂ.ಇ.ಎನ್. 4227 | ಬುಲೆಟ್ ಮೋಟಾರ್ ಸೈಕಲ್ | 1977 |
| 42 | ಎಂ.ಇ.ಎನ್. 4229 | ಬುಲೆಟ್ ಮೋಟಾರ್ ಸೈಕಲ್ | 1977 |
| 43 | ಎಂ.ಇ.ವಿ. 3998 | ಬುಲೆಟ್ ಮೋಟಾರ್ ಸೈಕಲ್ | 1972 |
| 44 | ಸಿ.ಕೆ.ಜಿ. 24 | ಬುಲೆಟ್ ಮೋಟಾರ್ ಸೈಕಲ್ | 1986 |
| 45 | ಸಿ.ಎ.ಜಿ. 596 | ಬುಲೆಟ್ ಮೋಟಾರ್ ಸೈಕಲ್ | 1983 |
| 46 | ಎಂ.ಇ.ಎ. 8301 | ಬುಲೆಟ್ ಮೋಟಾರ್ ಸೈಕಲ್ | 1975 |
| 47 | ಎಂ.ಇ.ಎ. 8302 | ಬುಲೆಟ್ ಮೋಟಾರ್ ಸೈಕಲ್ | 1975 |
| 48 | ಸಿ.ಎ.ಜಿ. 347 | ಬುಲೆಟ್ ಮೋಟಾರ್ ಸೈಕಲ್ | 1982 |
| 49 | ಸಿ.ಎ.ಜಿ. 726 | ಬುಲೆಟ್ ಮೋಟಾರ್ ಸೈಕಲ್ | 1983 |
| 50 | ಸಿ.ಎ.ಬಿ. 449 | ಬುಲೆಟ್ ಮೋಟಾರ್ ಸೈಕಲ್ | 1980 |
| 51 | ಸಿ.ಎ.ಜಿ. 47 | ಬುಲೆಟ್ ಮೋಟಾರ್ ಸೈಕಲ್ | 1981 |
| 52 | ಸಿ.ಎ.ಜಿ. 154 | ಬುಲೆಟ್ ಮೋಟಾರ್ ಸೈಕಲ್ | 1981 |
| 53 | ಎಂ.ಇ.ಇ. 3947 | ಬುಲೆಟ್ ಮೋಟಾರ್ ಸೈಕಲ್ | 1976 |
| 54 | ಎಂ.ಇ.ಇ. 3949 | ಬುಲೆಟ್ ಮೋಟಾರ್ ಸೈಕಲ್ | 1976 |
| 55 | ಎಂ.ಇ.ಜೆ. 9218 | ಯಜ್ಡಿ ಮೋಟಾರ್ ಸೈಕಲ್ | 1980 |
| 56 | ಎಂ.ಇ.ಆರ್. 7634 | ಬುಲೆಟ್ ಮೋಟಾರ್ ಸೈಕಲ್ | 1979 |
| 57 | ಎಂ.ಇ.ಆರ್. 7637 | ಬುಲೆಟ್ ಮೋಟಾರ್ ಸೈಕಲ್ | 1979 |
| 58 | ಎಂ.ಇ.ಆರ್. 7640 | ಬುಲೆಟ್ ಮೋಟಾರ್ ಸೈಕಲ್ | 1979 |
| 59 | ಎಂ.ಇ.ಜೆ. 9205 | ಬುಲೆಟ್ ಮೋಟಾರ್ ಸೈಕಲ್ | 1980 |
| 60 | ಎಂ.ಇ.ಇ. 4232 | ಬುಲೆಟ್ ಮೋಟಾರ್ ಸೈಕಲ್ | 1977 |
| 61 | ಎಂ.ಇ.ಆರ್. 7641 | ಮೋಟಾರ್ ಸೈಕಲ್ | 1979 |

**ಸೂಚನೆ :–**

ಹರಾಜಿನಲ್ಲಿ ಭಾಗವಹಿಸುವ ಎಲ್ಲಾ ಬಿಡ್‌ದಾರರು ಮತ್ತು ಟೆಂಡರ್‌ಗಳನ್ನು ಸಲ್ಲಿಸುವವರು ಈ ಕೆಳಗೆ ಸೂಚಿಸಿರುವ ಷರತ್ತು ನಿಭಂದನೆಗಳಿಗೆ ಒಳಪಟ್ಟಿರ ಬೇಕಾಗಿರುತ್ತದೆ.

**ಟೆಂಡರ್ / ಬಹಿರಂಗ ಹರಾಜಿನ ಷರತ್ತು ಮತ್ತು ನಿಬಂದನೆಗಳು:–**

1. ಮೊಹರು ಮಾಡಿದ ಟೆಂಡರ್ (ಸೀಲ್ಡ್ ಕವರ್) ಲಕೋಟೆಯನ್ನು ಉಪ ಪೊಲೀಸ್ ಆಯುಕ್ತರು, ನಗರ ಸಶಸ್ತ್ರ ಮೀಸಲು ಪಡೆ (ಕೇಂದ್ರ), ಮೈಸೂರು, ಬೆಂಗಳೂರು–18 ರವರ ವಿಳಾಸಕ್ಕೆ ಕಳುಹಿಸಬೇಕು. ನಿರುಪಯುಕ್ತ ಪೊಲೀಸ್ ವಾಹನಗಳನ್ನು ಖರೀದಿಸುವ ಬಗ್ಗೆ ಎಂಬುದನ್ನು ಬಿಡಿ ಅಕ್ಷರಗಳಲ್ಲಿ ಲಕೋಟೆಯ ಮೇಲೆ ನಮೂದಿಸಿರಬೇಕು.
2. ಪ್ರತಿಯೊಬ್ಬ ಟೆಂಡರ್ / ಸವಾಲ್ದಾರರು ರೂ.1,000–00 (ಒಂದು ಸಾವಿರ ರೂಪಾಯಿಗಳು ಮಾತ್ರ) ಠೇವಣಿ ಹಣವನ್ನು ಡಿ.ಡಿ. ಮೂಲಕ / ನಗದು ಹಣವನ್ನು ಉಪ ಪೊಲೀಸ್ ಆಯುಕ್ತರು, ನಗರ ಸಶಸ್ತ್ರ ಮೀಸಲು ಪಡೆ (ಕೇಂದ್ರ), ಮೈಸೂರು ರಸ್ತೆ, ಬೆಂಗಳೂರು–18 ರವರ ಹೆಸರಿನಲ್ಲಿ ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು. ಠೇವಣಿ ಹಣವಿಲ್ಲದೆ ಹರಾಜಿನಲ್ಲಿ ಭಾಗವಹಿಸುವಂತಿಲ್ಲ. ಠೇವಣಿ ಸಲ್ಲಿಸದೆ ಕಳುಹಿಸಲಾದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
3. ಟೆಂಡರ್ ಫಾರಂನಲ್ಲಿ ಅತಿ ಹೆಚ್ಚಿನ ದರವನ್ನು ಅಂಕಿ ಮತ್ತು ಅಕ್ಷರಗಳೆರಡರಲ್ಲಿಯೂ ಬರೆದಿರಬೇಕು. ಟೆಂಡರ್ ಫಾರಂನಲ್ಲಿ ಬೆಲೆಯನ್ನು ಬರೆಯುವಾಗ ಏನಾದರೂ ತಿದ್ದುಪಡಿ ಮಾಡಿದರೆ ಆ ಸ್ಥಳದಲ್ಲಿ ಟೆಂಡರ್‌ದಾರರು ಪೂರ್ಣ ಸಹಿ ಮಾಡತಕ್ಕದ್ದು. ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡಲಾಗುವುದಿಲ್ಲ.
4. ಪೂರ್ಣ ಗೊಳಿಸಿದ ಟೆಂಡರ್‌ಗಳನ್ನು ದಿನಾಂಕ: 07–07–2006 ಸಂಜೆ 04–00 ಗಂಟೆಯವರೆವಿಗೆ ಈ ಕಛೇರಿಯಲ್ಲಿ ಸಲ್ಲಿಸಿ ಕಳುಹಿಸತಕ್ಕದ್ದು. ನಂತರ ಬಂದ ಟೆಂಡರ್ ಫಾರಂಗಳನ್ನು ಪರಿಗಣಿಸಲಾಗುವುದಿಲ್ಲ.
5. ಟೆಂಡರ್‌ದಾರರು ಸಹ ಹರಾಜಿನಲ್ಲಿ ಹೆಚ್ಚಿನ ಠೇವಣಿ ಹಣವಿಲ್ಲದೆ ಭಾಗವಹಿಸಬಹುದು.
6. ಉಪ ಪೊಲೀಸ್ ಆಯುಕ್ತರು, ನಗರ ಸಶಸ್ತ್ರ ಮೀಸಲು ಪಡೆ (ಕೇಂದ್ರ) ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಬಹಿರಂಗ ಹರಾಜನ್ನು ನಡೆಸುವರು. ಠೇವಣಿಯನ್ನು ತುಂಬಿದ ಟೆಂಡರ್‌ದಾರರು / ಸವಾಲುದಾರರು ಮಾತ್ರ ಹರಾಜಿನಲ್ಲಿ ಭಾಗವಹಿಸಲು ಅರ್ಹರಾಗಿರುತ್ತಾರೆ.

7. ಬಹಿರಂಗ ಹರಾಜಿನಲ್ಲಿ ಅತೀ ಹೆಚ್ಚಿನ ಬೆಲೆ (ದರವನ್ನು) ದಾಖಲು ಗೊಳಿಸಿದ ನಂತರ ಸ್ವೀಕೃತ ಟೆಂಡರ್‌ಗಳನ್ನು ಉಪ ಪೊಲೀಸ್ ಆಯುಕ್ತರವರಾಗಲಿ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳಾಗಲೀ ಸಾರ್ವಜನಿಕರ ಸಮಕ್ಷಮದಲ್ಲಿ ತೆರೆದು ಬಹಿರಂಗ ಪಡಿಸುವರು. ಇದರಲ್ಲಿ ಅತೀ ಹೆಚ್ಚಿನ ದರವನ್ನು ಯಾರು ನಮೂದಿಸುವರೋ ಅವರನ್ನು ಯಶಸ್ವಿ ಟೆಂಡರ್ / ಸವಾಲುದಾರರೆಂದು ಪರಿಗಣಿಸಲಾಗುವುದು.
8. ಯಶಸ್ವಿಯಾದ ಟೆಂಡರ್‌ದಾರರು/ಸವಾಲುದಾರರು ಹರಾಜಿನ ಒಟ್ಟು ಬೆಲೆಯ ಶೇ. 25 ರಷ್ಟು ಹಣವನ್ನು (ಠೇವಣಿ ಬಿಟ್ಟು) ಸ್ಥಳದಲ್ಲಿಯೇ ತುಂಬಬೇಕು. ಉಳಿದ ಹಣವನ್ನು ಪೊಲೀಸ್ ಪ್ರಧಾನ ಕಛೇರಿ, ಬೆಂಗಳೂರು ನಗರ, ಬೆಂಗಳೂರು ರವರು ಸದರಿ ಹರಾಜಿನ ಮೊತ್ತಕ್ಕೆ ಒಪ್ಪಿಗೆ ನೀಡಿದ ನಂತರವೇ ಸಂಪೂರ್ಣ ಹಣ ಕಟ್ಟಿಸಿಕೊಂಡು ಹರಾಜು ಮಾಡಲಾದ ವಾಹನವನ್ನು 15 ದಿವಸಗಳೊಳಗಾಗಿ ತಮ್ಮ ವಶಕ್ಕೆ ನೀಡಲಾಗುವುದು.

   ಈ ವಾಹನವನ್ನು ತಮ್ಮ ಸ್ವಂತ ಖರ್ಚಿನಲ್ಲಿ ತೆಗೆದುಕೊಂಡು ಹೋಗತಕ್ಕದ್ದು, ತಪ್ಪಿದ್ದಲ್ಲಿ ನೀವು ಕಟ್ಟಿರುವ ಎಲ್ಲಾ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
9. ಎಲ್ಲಾ ಹಣವನ್ನು ಉಪ ಪೊಲೀಸ್ ಕಮೀಷನರ್‌ರವರ ಕಛೇರಿಗೆ ನಗದು ರೂಪದಲ್ಲಿ ತುಂಬಬೇಕು. ಚೆಕ್ಕುಗಳನ್ನು ಸ್ವೀಕರಿಸಲಾಗುವುದಿಲ್ಲ.
10. ಹರಾಜು ಮುಗಿದ ನಂತರ ಯಶಸ್ವಿಯಾಗದ ಟೆಂಡರ್/ಸವಾಲುದಾರರ ಠೇವಣಿ ಹಣವನ್ನು ಸ್ಥಳದಲ್ಲಿಯೇ ಹಿಂದಿರುಗಿಸಲಾಗುವುದಿಲ್ಲ.

10ಎ. ಯಶಸ್ವಿಯಾದ ಟೆಂಡರ್‌ದಾರರು/ಸವಾಲುದಾರರು ಈ ಕಛೇರಿಯ ಪತ್ರ ತಲುಪಿದ 15 ದಿನದೊಳಗಾಗಿ ಉಳಿದ ಹಣವನ್ನು ಪಾವತಿ ಮಾಡಿ ವಾಹನಗಳನ್ನು ತಮ್ಮ ವಶಕ್ಕೆ ತೆಗೆದುಕೊಂಡು ಹೋಗತಕ್ಕದ್ದು. ತಪ್ಪಿದಲ್ಲಿ ನಂತರದ ಅವಧಿಯಲ್ಲಿ ಬಿಡ್ಡ್ ಮೊತ್ತಕ್ಕೆ ಶೇಕಡ 01ರಂತೆ ದಂಡ ವಸೂಲು ಮಾಡಲಾಗುವುದು ಹಾಗೂ ತಾವು ಕಟ್ಟಿರುವ ಇ.ಎಂ.ಡಿ. ಮೊತ್ತವನ್ನು ವಾಪಸ್ಸು ಪಡೆಯಲು ಯಾವುದೇ ಹಕ್ಕು ಇರುವುದಿಲ್ಲ.

11. ಹರಾಜು ಮುಗಿದ ನಂತರ ಯಶಸ್ವಿಯಾಗದ ಟೆಂಡರ್/ಸವಾಲುದಾರರ ಠೇವಣಿ ಹಣವನ್ನು ಸ್ಥಳದಲ್ಲಿಯೇ ಹಿಂದಿರುಗಿಸಲಾಗುವುದು.
12. ಈ ಬಹಿರಂಗ ಹರಾಜಿನಲ್ಲಿ ಭಾಗವಹಿಸುವ ಟೆಂಡರ್/ಸವಾಲುದಾರರು ಸರ್ಕಾರಿ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸಬೇಕು.
13. ಮೋಟಾರು ವಾಹನಗಳ ತೆರಿಗೆಯನ್ನು ಆ ಸಂದರ್ಭದಲ್ಲಿ ಚಾಲ್ತಿಯಲ್ಲಿರುವ ದರ ಹಾಗೂ ನಿಯಮಗಳ ಮೇಲೆ ವಸೂಲು ಮಾಡಲಾಗುವುದು.
14. ಹರಾಜಿನಲ್ಲಿ ಭಾಗವಹಿಸುವ ಬಿಡ್ಡುದಾರರು ಅವರ ಸಂಪೂರ್ಣವಾದ ವಿಳಾಸವನ್ನು ಬರೆದಿರುವ ಚೀಟಿಯೊಂದಿಗೆ ಠೇವಣಿ ಹಣವನ್ನು ಪಾವತಿ ಮಾಡತಕ್ಕದ್ದು.
15. ಯಶಸ್ವಿ ಟೆಂಡರ್/ಸವಾಲುದಾರರು ಪೂರ್ಣ ಹಣ ಪಾವತಿ ಮಾಡಿದ ಕೂಡಲೇ ವಾಹನವನ್ನು ತಮ್ಮ ಸ್ವಂತ ಖರ್ಚಿನಲ್ಲಿ ಸಾಗಿಸಿಕೊಳ್ಳುವ ವ್ಯವಸ್ಥೆಯನ್ನು ಮಾಡಿಕೊಳ್ಳಬೇಕು
16. ಟೆಂಡರ್/ಹರಾಜಿನಲ್ಲಿ ಭಾಗವಹಿಸಿ ಯಶಸ್ವಿಯಾದ ಟೆಂಡರ್/ಬಿಡ್‌ದಾರರು ಅವರ ತಪ್ಪು ಗ್ರಹಿಕೆಯಿಂದ ಇಲಾಖೆಗೆ ನಷ್ಟವಾಗುವಂತಹ ಸಂದರ್ಭ ಉದ್ಭವಿಸಿದಲ್ಲಿ ಅಂತಹ ಟೆಂಡರ್ ದಾರರು/ಬಿಡ್‌ದಾರರು ಮುಂಗಡವಾಗಿ ಕಟ್ಟಲಾದ (ಇ.ಎಂ.ಡಿ.) ಹಣದಲ್ಲಿ ನಷ್ಟವನ್ನು ವಸೂಲಿ ಮಾಡುವ ಅಧಿಕಾರವನ್ನು ಉಪ ಪೊಲೀಸ್ ಕಮೀಷನರ್, ನಗರ ಸಶಸ್ತ್ರ ಮೀಸಲು ಪಡೆ ಕೇಂದ್ರ ರವರ ತೀರ್ಮಾನಕ್ಕೆ ಬಿಡಲಾಗಿದೆ ಹಾಗೂ ಅಂತಹ ವಸೂಲಿ ಮಾಡಲು ತೀರ್ಮಾನಿಸಿದ ಹಣವನ್ನು ಸ್ಥಳದಲ್ಲಿ ಪಾವತಿ ಮಾಡತಕ್ಕದ್ದು. ತಪ್ಪಿದಲ್ಲಿ ಸಂಬಂಧಪಟ್ಟವರ ವಿರುದ್ಧ ಕಾನೂನು ಬದ್ಧವಾಗಿ ಕ್ರಮ ತೆಗೆದುಕೊಳ್ಳಲಾಗುವುದು.
17. ಕೆಲವು ಬಿಡ್ಡುದಾರರು ಹರಾಜಿನ ಸಂದರ್ಭದಲ್ಲಿ ಈ ಹಿಂದೆ ಸುಳ್ಳು ವಿಳಾಸಗಳನ್ನು ನೀಡಿ ವಾಹನಗಳಿಗೆ ಹೆಚ್ಚಿನ ಮೊತ್ತಕ್ಕೆ ಸವಾಲು ಮಾಡಿ ನಂತರ ಹಣವನ್ನು ಕಟ್ಟದೆ ಇರುವ ಪ್ರಸಂಗಗಳು ನಡೆದಿದ್ದು, ಈ ರೀತಿ ತಪ್ಪು ವಿಳಾಸಗಳನ್ನು ನೀಡುವ ಅಥವಾ ಬಾಕಿ ಉಳಿದ ಹರಾಜು ಮೊತ್ತವನ್ನು ಪಾವತಿ ಮಾಡದೇ ಇರುವ ಟೆಂಡರ್ ಹಾಗೂ ಬಿಡ್ಡುದಾರರ ವಿರುದ್ಧ ಸೂಕ್ತ ಶಿಸ್ತಿನ ಕ್ರಮ ಕೈಗೊಳ್ಳಲಾಗುವುದು.
18. ಹರಾಜಿನಲ್ಲಿ ಯಾವುದೇ ಟೆಂಡರ್/ಸವಾಲನ್ನು ಯಾವುದೇ ಕಾರಣಕ್ಕಾಗಿ ರದ್ದುಗೊಳಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಉಪ ಪೊಲೀಸ್ ಕಮೀಷನರ್, ನಗರ ಸಶಸ್ತ್ರ ಮೀಸಲು ಪಡೆ ಕೇಂದ್ರ ಘಟಕ ರವರು ಹೊಂದಿರುತ್ತಾರೆ. ಇವರ ನಿರ್ಣಯವೇ ಅಂತಿಮವಾದದ್ದು.
19. ವಾಹನಗಳನ್ನು (ಹೇಗಿದೆಯೋ ಹಾಗೆ) ಈಗ ಇರುವ ಸ್ಥಿತಿಯಲ್ಲಿಯೇ ಹರಾಜು ಮಾಡಲಾಗುವುದು. ಯಾವುದೇ ಕಾರಣಕ್ಕೂ ಸ್ಕ್ರಾಫ್ (ಬಿಡಿಭಾಗ) ಎಂದು ಪರಿಗಣಿಸಲಾಗುವುದಿಲ್ಲ.
20. ಹರಾಜಿನಲ್ಲಿ ವಾಹನಗಳನ್ನು ಪಡೆದ ಬಿಡ್‌ದಾರರು ತೆರಿಗೆಯೊಂದಿಗೆ ಪೂರ್ತಿ ಹಣವನ್ನು ಪಾವತಿ ಮಾಡಿದ ನಂತರ ವಾಹನದ ಮೂಲ ದಾಖಲೆಗಳನ್ನು ಪಡೆದು ಪ್ರಪತ್ರ 29 ಹಾಗೂ 30ರ ಮೂಲಕ ಆರ್.ಟಿ.ಓ. ರವರಿಂದ ವಾಹನದ ಮಾಲೀಕತ್ವವನ್ನು ತಮ್ಮ ಹೆಸರಿಗೆ ಬದಲಾಯಿಸಿಕೊಳ್ಳತಕ್ಕದ್ದು.

ಮೇಲೆ ತಿಳಿಸಿರುವ ಹರಾಜಿನ ಷರತ್ತು ಮತ್ತು ನಿಬಂಧನೆಗಳ ವಿಷಯದಲ್ಲಿ ಯಾವುದೇ ವಾದ/ವಿವಾದ ಉದ್ಭವಿಸಿದ್ದಲ್ಲಿ ಮಹಾ ನಿರ್ದೇಶಕರು ಮತ್ತು ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ರಾಜ್ಯ, ಬೆಂಗಳೂರು ಅಥವಾ ಪೊಲೀಸ್ ಕಮೀಷನರ್, ಬೆಂಗಳೂರು ರವರು ನೀಡುವ ನಿರ್ಣಯವೇ ಅಂತಿಮವಾಗಿರುತ್ತದೆ.

21. ಇಚ್ಛೆಯುಳ್ಳ ಟೆಂಡರ್/ಸವಾಲುದಾರರು ಹರಾಜು ಮಾಡಲಿರುವ ನಿರುಪಯುಕ್ತ ವಾಹನಗಳನ್ನು ಉಪ ಪೊಲೀಸ್ ಕಮೀಷನರ್ ರವರ ಕಛೇರಿ, ನಗರ ಸಶಸ್ತ್ರ ಮೀಸಲು ಪಡೆ ಕೇಂದ್ರ, ವಾಹನ ವಿಭಾಗ, ಮೈಸೂರು ರಸ್ತೆ, ಬೆಂಗಳೂರು ಇಲ್ಲಿ ಕಛೇರಿಯ ವೇಳೆಯಲ್ಲಿ ನೋಡಬಹುದು.

ಉಪ ಪೊಲೀಸ್ ಕಮೀಷನರ್,
ನಗರ ಸಶಸ್ತ್ರ ಮೀಸಲು ಪಡೆ ಕೇಂದ್ರ, ಬೆಂಗಳೂರು.

ಪಿ.ಆರ್. 334

## ಅರಣ್ಯ ಇಲಾಖೆ

## ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯರ ಕಛೇರಿ ಸಾಮಾಜಿಕ ಅರಣ್ಯ, ಅರಣ್ಯ ಭವನ, 6ನೇ ಮಹಡಿ, 18ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು-560 003

### ತಿದ್ದುಪಡಿ

**ಸಂಖ್ಯೆ:ಎ2(ಬಿ):ಬಿಯುಡಿ:ಸಾಅ:ದೂರವಾಣಿ ಸೌಲಭ್ಯ:ಸಿಆರ್-41:2005-06, ದಿನಾಂಕ: 8ನೇ ಜೂನ್ 2006**

ಈ ಕಛೇರಿ ಪ್ರಕಟಣೆ ಸಂಖ್ಯೆ: ಸಂಖ್ಯೆ:ಎ2(ಬಿ):ಬಿಯುಡಿ:ಸಾಅ:ದೂರವಾಣಿ ಸೌಲಭ್ಯ:ಸಿಆರ್-41:2005-06 ದಿನಾಂಕ: 25.5.2006ರಲ್ಲಿ ಈ ಕಛೇರಿಗೆ 150 ನೋಕಿಯಾ ಮೊಬೈಲ್ ಫೋನ್‌ಗಳ ಸರಬರಾಜು ಮಾಡಲು OEM ಮತ್ತು ಅವರ ಅಂಗೀಕೃತ ವಿತರಕರಿಂದ ಟೆಂಡರ್‌ಗಳನ್ನು ಕರೆಯಲಾಗಿತ್ತು. ಟೆಂಡರ್ ಫಾರಂಗಳನ್ನು ವಿತರಿಸಲು ಕೊನೆಯ ದಿನಾಂಕ ಮತ್ತು ಟೆಂಡರ್ ಫಾರಂಗಳನ್ನು ಸ್ವೀಕರಿಸಲು ಹಾಗೂ ತೆರೆಯಲು ದಿನಾಂಕ: 25.6.2006 ಎಂದು ನಮೂದಿಸಲಾಗಿದೆ. ಸದರಿ ದಿನಾಂಕವನ್ನು ದಿನಾಂಕ: 26.6.2006 ಎಂದು ಓದಿಕೊಳ್ಳತಕ್ಕದ್ದು.

ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ,
ಪಿ.ಆರ್. 330 ಸಾಮಾಜಿಕ ಅರಣ್ಯ, ಬೆಂಗಳೂರು.

## ತೋಟಗಾರಿಕೆ ಇಲಾಖೆ

## ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರು-4

### ಸಂಕ್ಷಿಪ್ತ ಟೆಂಡರ್ ಆಹ್ವಾನ ಪ್ರಕಟಣೆ

**ಸಂ:ತೋಉನಿ:ಲಾಸತೋ:ವಿನಿ1:8:2006-07, ದಿನಾಂಕ: 5ನೇ ಜೂನ್ 2006**

ಲಾಲ್‌ಬಾಗ್ ಸಸ್ಯತೋಟದ ಉದ್ಯಾನ, ಪುಷ್ಪಭಿವೃದ್ಧಿ ವಿಭಾಗ ಮತ್ತು ಕಬ್ಬನ್ ಉದ್ಯಾನವನಗಳ ಉಪಯೋಗಕ್ಕೆ ಹಾಗೂ ವರ್ಷದಲ್ಲಿ ಎರಡು ಬಾರಿ ನಡೆಯುವ ಫಲಪುಷ್ಪ ಪ್ರದರ್ಶನದ ಸಲುವಾಗಿ ಕುಂಡಗಳಲ್ಲಿ ಬೆಳೆಸುವ ಅಲಂಕಾರಿಕ : ಹೂವಿನ ಗಿಡಗಳ ಹಾಗೂ ಹೂವಿನ ಮಡಿಗಳಿಗೆ ಬೇಕಾಗುವ ಕೊಟ್ಟಿಗ ಗೊಬ್ಬರ, ಕುದುರೆ ಗೊಬ್ಬರ, ಕೆಂಪು ಮಣ್ಣು, ಮರಳು, ರಾಸಾಯನಿಕ ಗೊಬ್ಬರಗಳು, ಮಣ್ಣಿನ ಕುಂಡಗಳು, ತೋಟಗಾರಿಕೆ ಸಲಕರಣೆ, ವಿವಿಧ ಹಿಂಡಿಗಳು ಮತ್ತು ಹೋಸ್ ಪೈಪ್‌ಗಳಿಗಾಗಿ 2006-07ನೇ ಸಾಲಿಗಾಗಿ ಒಂದು ವರ್ಷದ ಅವಧಿಯಲ್ಲಿ ಸರಬರಾಜು ಮಾಡುವುದಕ್ಕೆ ಟೆಂಡರ್‌ಗಳನ್ನು ಆಹ್ವಾನಿಸಿ ದರಗಳನ್ನು ಅನುಮೋದಿಸಿಕೊಳ್ಳಬೇಕಾಗಿದೆ. ಆದುದರಿಂದ ಈ ಕೆಳಕಂಡ ಷರತ್ತುಗಳಿಗೆ ಒಪ್ಪಿದಲ್ಲಿ ಈ ಕೆಳಗೆ ಸೂಚಿಸಿರುವ ಪದಾರ್ಥಗಳನ್ನು ಸರಬರಾಜು ಮಾಡಲು ನಿಗದಿತ ಟೆಂಡರ್ ಫಾರಂಗಳನ್ನು ತೋಟಗಾರಿಕೆ ಉಪ ನಿರ್ದೇಶಕರು ಲಾಲ್‌ಬಾಗ್ ಸಸ್ಯತೋಟ ರವರ ಕಛೇರಿಯಿಂದ ದಿನಾಂಕ:27.6.2006 ರಿಂದ 30.6.2006 ವರೆಗೆ ರೂ. 500-00 ದರದಲ್ಲಿ ಪಡೆಯಬಹುದು. ಭರ್ತಿ ಮಾಡಿದ ಟೆಂಡರ್‌ಗಳನ್ನು ಮೊಹರು ಮಾಡಿದ ಲಕೋಟೆಯೊಂದಿಗೆ ತೋಟಗಾರಿಕೆ ಉಪ ನಿರ್ದೇಶಕರು ಲಾಲ್‌ಬಾಗ್ ಸಸ್ಯತೋಟ ರವರ ಲಾಲ್‌ಬಾಗ್ ಬೆಂಗಳೂರು ರವರ ಕಛೇರಿಗೆ ದಿನಾಂಕ: 3.7.2006 ರಂದು ಸಂಜೆ 1-00 ಗಂಟೆಯೊಳಗೆ ಸಲ್ಲಿಸಬೇಕು. ಟೆಂಡರ್‌ಗಳನ್ನು ಅದೇ ದಿನ **(3.7.2006)** ಸಂಜೆ 4.00 ಗಂಟೆಗೆ ಹಾಜರಿರುವ ಟೆಂಡರ್‌ದಾರರ ಸಮ್ಮುಖದಲ್ಲಿ ತೆರೆಯಲಾಗುವುದು. ಹೆಚ್ಚಿನ ವಿವರಗಳಿಗಾಗಿ ತೋಟಗಾರಿಕೆ ಉಪ ನಿರ್ದೇಶಕರು, ಲಾಲ್‌ಬಾಗ್, ಸಸ್ಯತೋಟ, ಬೆಂಗಳೂರು, ರವರನ್ನು ಕಛೇರಿ ವೇಳೆಯಲ್ಲಿ ಸಂಪರ್ಕಿಸಬಹುದು.

ತೋಟಗಾರಿಕೆ ಉಪ ನಿರ್ದೇಶಕರು,
ಪಿ.ಆರ್. 331 ಲಾಲ್‌ಬಾಗ್, ಸಸ್ಯತೋಟ.

## FORM - IV

**(See Rule 12)**

**NOTICE**

It is hereby notified that the undersigned has changed his name from **SOMALING NINGAPPA HUCHARAYAPPAGOL** to **SOMALING NINGAPPA GANAGI.**

P.D. 127 **SOMALING NINGAPPA HUCHARAYAPPAGOL.**

## ಅರಣ್ಯ ಇಲಾಖೆ

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಕಾವೇರಿ ವನ್ಯಜೀವಿ ವಿಭಾಗ, ಕನಕಪುರ

### ಸಂಕ್ಷಿಪ್ತ ಟೆಂಡರ್ ಅಧಿಸೂಚನೆ

**ಸಂಖ್ಯೆ:ಎ3/ಬಿಯುಡಿ/ಸಿಆರ್-10/2006-07, ದಿನಾಂಕ: 31ನೇ ಮೇ 2006**

ಈ ಮೂಲಕ ಸಾರ್ವಜನಿಕರಿಗೆ ತಿಳಿಸುವುದೇನೆಂದರೆ ಈ ಕೆಳಗಿನ ಅನುಸೂಚಿಯಲ್ಲಿ ನಮೂದಿಸಿರುವ ಒಂದನೇ ವರ್ಷದ ನೆಡುತೋಪುಗಳ ನಿರ್ವಹಣೆ ಮಾಡುವುದು, ಹಾಗೂ ನೆಡುತೋಪು ಬೆಳೆಸುವುದು, ವಿವಿಧ ರೀತಿಯ ಇತರೆ ಕಾಮಗಾರಿಗಳನ್ನು 2006–07ನೇ ಸಾಲಿನಲ್ಲಿ ಕೈಗೊಳ್ಳಲು, ಈ ವಿಭಾಗದಲ್ಲಿ ಅರಣ್ಯ ಗುತ್ತಿಗೆದಾರರಾಗಿ ಹೆಸರು ನೋಂದಾಯಿಸಿಕೊಂಡಿರುವವರಿಂದ ಮೊಹರಾದ ಟೆಂಡರನ್ನು ಆಹ್ವಾನಿಸಲಾಗಿದೆ. ಟೆಂಡರ್‌ಗಳನ್ನು ದಿನಾಂಕ 24–06–2006 ರಂದು ಮದ್ಯಾಹ್ನ 1:30 ಗಂಟೆಯವರೆಗೆ ಸ್ವೀಕರಿಸಲಾಗುವುದು. ಹೀಗೆ ಸ್ವೀಕರಿಸಿದ ಟೆಂಡರ್‌ಗಳನ್ನು ಅದೇ ದಿನ 3:00 ಗಂಟೆಗೆ ಹಾಜರಿರುವ ಅರಣ್ಯ ಗುತ್ತಿಗೆದಾರರ ಸಮಕ್ಷಮ ಈ ಕೆಳ ಸಹಿ ಮಾಡಿರುವ ಅಧಿಕಾರಿಗಳು ಅಥವಾ ಅವರಿಂದ ಪ್ರಾಧೀಕೃತಗೊಂಡ ಅಧಿಕಾರಿಗಳಿಂದ ತೆರೆದು ಓದಲಾಗುವುದು. ಒಂದು ವೇಳೆ ಟೆಂಡರ್ ದಿನಾಂಕವು ಸಾರ್ವಜನಿಕ ರಜೆ ಎಂದು ಘೋಷಿತವಾದರೆ ಮರುದಿನ ಅದೇ ಸಮಯಕ್ಕೆ ತೆರೆಯಲಾಗುವುದು.

ಟೆಂಡರ್ ಫಾರಂ ಗಳನ್ನು ರೂ.200.00 ಮತ್ತು ಚಾಲ್ತಿಯಲ್ಲಿರುವ ತೆರಿಗೆಗಳನ್ನು ಪಾವತಿಸಿ ಈ ಕಛೇರಿಯಲ್ಲಿ ದಿನಾಂಕ 23–06–2006ರ ಸಂಜೆ 4:30 ಗಂಟೆಯವರೆಗೆ ಪಡೆಯಬಹುದಾಗಿದೆ. ಇಚ್ಛೆಯುಳ್ಳ ಗುತ್ತಿಗೆದಾರರು ಟೆಂಡರ್‌ನ್ನು ಸಲ್ಲಿಸಬಹುದು.

## ಅನುಸೂಚಿ

2005–06 ರಿಂದ 2006–07 ನೇ ಸಾಲಿನವರೆಗೆ ಈ ವಿಭಾಗದ ಕೆಳಕಂಡ ವಲಯಗಳಲ್ಲಿ ಬೆಳೆಸಿರುವ ನೆಡುತೋಪುಗಳ 1 ವರ್ಷದ ಪೋಷಣೆಯ ಹಾಗೂ ಹೊಸದಾಗಿ ನಿರ್ಮಾಣ ಮಾಡುವ ಕಾಮಗಾರಿಗಳು.

ಕಾಮಗಾರಿಯ ವಿವರ : 2006–07 ನೇ ಸಾಲಿಗೆ ಕೆ.ಎಸ್.ಎಫ್.ಎಮ್.ಬಿ.ಸಿ ಯೋಜನೆಯಡಿಯಲ್ಲಿ ನೆಡುತೋಪು ನಿರ್ವಹಣೆ ಹಾಗೂ ನಿರ್ಮಾಣ ಕಾಮಗಾರಿಗಳು ನೆಡುತೋಪು ಕಾವಲುಗಾರನ ವೇತನ ಮಾರ್ಚ್ 2007 ರವರೆಗೆ, ಜಾನುವಾರು ತಡೆ ಕಂದಕ ನಿರ್ಮಾಣ ಬೀಜಗಳ ಸರಬರಾಜು, ಕಟಿಂಗ್ಸ್ ಹಾಕುವ ಕಾರ್ಯ, ಬೆಂಕಿ ರೇಖೆಗಳ ನಿರ್ಮಾಣ ಹಾಗೂ ನಿರ್ವಹಣೆ, ಬೀಜಗಳನ್ನು ತಾಲಿಸ್‌ನಲ್ಲಿ ಹಾಗೂ ಪೊದೆಗಳಲ್ಲಿ ಬಿತ್ತನೆ ಮಾಡುವುದು, ಟೆಂಡಿಂಗ್ ಆಪರೇಷನ್, ನೆಡುತೋಪಿನಲ್ಲಿ ಮಣ್ಣು ಹಾಗೂ ನೀರಿನ ಸಂರಕ್ಷಣಾ ಕೆಲಸಗಳು, ರಸ್ತೆ ನಿರ್ವಹಣಾ ಕೆಲಸಗಳು.

**ಕನಕಪುರ ವನ್ಯಜೀವಿ ವಲಯ.**

| ಕ್ರ. ಸಂ | ಅರಣ್ಯಾಭಿವೃದ್ದಿ ಕಾಮಗಾರಿ ನಿರ್ವಹಿಸಬೇಕಾದ ಸ್ಥಳ | ಲೆಕ್ಕ ಶೀರ್ಷಿಕೆ | ವಿಸ್ತೀರ್ಣ (ಹೆಕ್ಟೇರ್ ಗಳಲ್ಲಿ) | ಕಾಮಗಾರಿಯ ಅಂದಾಜು ಮೊತ್ತ (ರೂಗಳಲ್ಲಿ) | ಕಾಮಗಾರಿ ಪೂರ್ಣಗೊಳಿಸ ಬೇಕಾದ ದಿನಾಂಕ | ಮುಂಗಡ ಠೇವಣಿ ಮೊಬಲಗು |
|---|---|---|---|---|---|---|
| 1. | ಮುತ್ತತ್ತಿ ಇ.ಡಿ.ಸಿ ವ್ಯಾಪ್ತಿ ಪ್ರದೇಶದಲ್ಲಿ | ಕೆ.ಎಸ್.ಎಫ್.ಎಮ್.ಬಿ.ಸಿ ಯೋಜನೆ | 100 | 149300.00 | ಪ್ಯಾಕೇಜ್ ಆಫ್ ಪ್ರಾಕ್ಟೀಸ್ ಪ್ರಕಾರ ಋತುಮಾನಕ್ಕೆ ಅನುಗುಣವಾಗಿ ನಿಗಧಿಪಡಿಸಿದ ಅವಧಿಯಲ್ಲಿ ಕೆಲಸ ಮಾಡತಕ್ಕದ್ದು, ಮಜೂರಿ ಹೊರತುಪಡಿಸಿ ಇತರೆ ಕಾಮಗಾರಿಗಳನ್ನು 30–11–06 ರ ಒಳಗೆ | 3733.00 |
| 2. | ಸ್ಪೋಲಿಗೇರಿ ಇ.ಡಿ.ಸಿ ವ್ಯಾಪ್ತಿ ಪ್ರದೇಶ | | 82 | 122426.00 | | 3061.00 |
| 3. | ಹುಳ್ಯ ಹೊಸದೊಡ್ಡಿ ವ್ಯಾಪ್ತಿ ಪ್ರದೇಶ | | 100 | 149300.00 | | 3733.00 |
| 1. | ಮುತ್ತತ್ತಿ ಇ.ಡಿ.ಸಿ ವ್ಯಾಪ್ತಿ ಪ್ರದೇಶ | ಕೆ.ಎಸ್.ಎಫ್.ಎಮ್.ಬಿ.ಸಿ ಯೋಜನೆ | 100 | 677925.00 | | 13558.00 |
| 2. | ಸೋಲಿಗೇರಿ ಇ.ಡಿ.ಸಿ ವ್ಯಾಪ್ತಿ ಪ್ರದೇಶ | | 50 | 338963.00 | | 8475.00 |
| | **ಇತರೆ ಕೆಲಸಗಳು** | **ಡಿ.ಎನ್.ಪಿ.ಎಸ್. (ರಾಜ್ಯ)** | | **2,20,000.00** | | **5500.00** |

| ಕ್ರ. ಸಂ | ಅರಣ್ಯಾಭಿವೃದ್ದಿ ಕಾಮಗಾರಿ ನಿರ್ವಹಿಸಬೇಕಾದ ಸ್ಥಳ | ಲೆಕ್ಕ ಶೀರ್ಷಿಕೆ | ಸಂಖ್ಯೆ | ಕಾಮಗಾರಿಯ ಅಂದಾಜು ಮೊತ್ತ (ರೂಗಳಲ್ಲಿ) | ಕಾಮಗಾರಿ ಪೂರ್ಣಗೊಳಿಸ ಬೇಕಾದ ದಿನಾಂಕ | ಮುಂಗಡ ಠೇವಣಿ ಮೊಬಲಗು |
|---|---|---|---|---|---|---|
| | **ಹನೂರು ವನ್ಯಜೀವಿ ವಲಯ** | | | | | |
| | ವಿವಿಧ ರೀತಿಯ ಅರಣ್ಯ ಅಭಿವೃದ್ದಿ ಕೆಲಸಗಳು | ಡಿ.ಎನ್.ಪಿ.ಎಸ್. (ರಾಜ್ಯ) | | 1,50,000.00 | 31–7–06 | 6750.00 |
| | | | | 1,20,000.00 | 31–8–06 | |
| | **ಕೌದಳ್ಳಿ ವನ್ಯಜೀವಿ ವಲಯ** | | | | | |
| | ವಿವಿಧ ರೀತಿಯ ಅರಣ್ಯ ಅಭಿವೃದ್ದಿ ಕೆಲಸಗಳು | ಡಿ.ಎನ್.ಪಿ.ಎಸ್. (ರಾಜ್ಯ) | | 2,00,000.00 | 31–7–06 | 8000.00 |
| | | | | 1,20,000.00 | 31–8–06 | |
| | **ಮ. ಮ. ಬೆಟ್ಟ ವನ್ಯಜೀವಿ ವಲಯ** | | | | | |
| | ವಿವಿಧ ರೀತಿಯ ಅರಣ್ಯ ಅಭಿವೃದ್ಧಿ ಕೆಲಸಗಳು | ಡಿ.ಎನ್.ಪಿ.ಎಸ್. (ರಾಜ್ಯ) | | 1,50,000.00 | 31–7–06 | 7500.00 |
| | | | | 1,50,000.00 | 31–8–06 | |

**ಷರತ್ತುಗಳು :–**

1. ದಿನಾಂಕ 24–06–06 ರಂದು ನಡೆಯುವ ಟೆಂಡರ್‌ನಲ್ಲಿ ಟೆಂಡರ್ ಆಗದ ಕಾಮಗಾರಿಗಳಿಗೆ ದಿನಾಂಕ 03–07–06 ರಂದು ಮರು ಟೆಂಡರನ್ನು ಕರೆಯಲಾಗಿದ್ದು, ಸದರಿ ದಿನದಂದು ಮೇಲೆ ತಿಳಿಸಿದಂತೆ ಟೆಂಡರ್‌ಫಾರಂ ಗಳನ್ನು ಮಧ್ಯಾಹ್ನ 1:30 ಗಂಟೆಯವರೆಗೆ ಸ್ವೀಕರಿಸಲಾಗುವುದು ಹಾಗೂ ಅದೇ ದಿನ 3:30 ಗಂಟೆಗೆ ಟೆಂಡರ್ ತೆರೆದು ಓದಲಾಗುವುದು, ಈ ಬಗ್ಗೆ ಮತ್ತೊಂದು ಮರುಟೆಂಡರ್ ಪ್ರಕಟಣೆಯನ್ನು ಹೊರಡಿಸುವುದಿಲ್ಲ.
2. ಮೇಲ್ಕಂಡ ಕಾಮಗಾರಿಗಳ ಕ್ರಿಯಾ ಯೋಜನೆಗಳನ್ನು ಮಂಜೂರಾತಿಗಾಗಿ ಮೇಲಾಧಿಕಾರಿಗಳಿಗೆ ಸಲ್ಲಿಸಲಾಗಿದ್ದು, ಕ್ರಿಯಾ ಯೋಜನೆಯ ಮಂಜೂರಾತಿ ಆಧಾರದ ಮೇಲೆ ಮಾತ್ರ ಕಾಮಗಾರಿಗಳನ್ನು ಕೈಗೊಳ್ಳಲಾಗುವುದು. ಮೇಲ್ಕಂಡ ಕಾಮಗಾರಿಗಳನ್ನು ಕೈಗೊಳ್ಳುವ ಬಗ್ಗೆ ಕ್ರಿಯಾ ಯೋಜನೆ ಮಂಜೂರಾಗದೆ ಇದ್ದ ಪಕ್ಷದಲ್ಲಿ ಅಂತಹ ಕಾಮಗಾರಿಗಳನ್ನು ಯಾವುದೇ ಕಾರಣಕ್ಕೂ ಕೈಗೊಳ್ಳುವುದಿಲ್ಲ.
3. ಟೆಂಡರುದಾರರು ಪ್ರತಿ ಕಾಮಗಾರಿಗೆ, ಪ್ರತಿ ವಲಯಕ್ಕೆ ಸಂಬಂಧಿಸಿದಂತೆ ಪ್ರತ್ಯೇಕ ಟೆಂಡರ್ ಫಾರಂಗಳನ್ನು ಸಲ್ಲಿಸಬೇಕು ಟೆಂಡರ್ ಫಾರಂನಲ್ಲಿ ಟೆಂಡರ್ ಮೊತ್ತವನ್ನು ಸ್ಪಷ್ಟವಾಗಿ ಅಂಕಿ ಹಾಗೂ ಅಕ್ಷರಗಳಲ್ಲಿ ನಮೂದಿಸಬೇಕು.
4. ಪ್ರತಿ ಕಾಮಗಾರಿಗೆ ನಿಗಧಿಪಡಿಸಿರುವ ಇ.ಎಮ್.ಡಿ (ಠೇವಣಿ ಹಣ) ಹಣವನ್ನು ರಾಷ್ಟ್ರೀಕೃತ ಬ್ಯಾಂಕಿನಿಂದ 'ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಕಾವೇರಿ ವನ್ಯಜೀವಿ ವಿಭಾಗ, ಕನಕಪುರ' ಇವರ ಹೆಸರಿನಲ್ಲಿ ಡಿ.ಡಿ ರೂಪದಲ್ಲಿ ಪಡೆದು ಟೆಂಡರ್ ಫಾರಂಜೊತೆಗೆ ಲಗತ್ತಿಸಬೇಕು.

5. ಮೇಲೆ ತಿಳಿಸಿರುವ ಕೆಲಸವು ಅಂದಾಜಿನದ್ದಾಗಿದ್ದು ಯಾವುದೇ ಕಾರಣವಿಲ್ಲದೆ ಬದಲಾವಣೆಗೆ ಒಳಪಟ್ಟಿರುತ್ತದೆ ಮತ್ತು ಈ ಬಗ್ಗೆ ಅಂತಿಮ ತೀರ್ಮಾನ ಉಪ ಅರಣ್ಯ ಸಂರಕ್ಷಣಾಧಿಕಾರಿಗಳದ್ದಾಗಿರುತ್ತದೆ.
6. ಟೆಂಡರ್‌ನಲ್ಲಿ ಯಶಸ್ವಿಯಾದ ಗುತ್ತಿಗೆದಾರರಿಗೆ ಕಾಮಗಾರಿಯು ಪೂರ್ಣಗೊಂಡ ನಂತರ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು ಕಾಮಗಾರಿಗಳನ್ನು ಪರಿಶೀಲಿಸಿ ಅಳತೆ ಮಾಪನ ಮಾಡಿಕೊಂಡ ನಂತರ ಹಾಗೂ ಹಣದ ಲಭ್ಯತೆಯ ಆಧಾರದ ಮೇಲೆ ಬಿಲ್ಲಿನ ಹಣವನ್ನು ಪಾವತಿಸಲು ಕ್ರಮಕೈಗೊಳ್ಳಲಾಗುವುದು.
7. ಕರಾರು ಒಪ್ಪಂದ ಮಾಡಿಕೊಂಡ ಗುತ್ತಿಗೆದಾರರು ಆದೇಶ ಕೊಟ್ಟ 30 ದಿನಗಳೊಳಗೆ ಸಂಬಂಧಪಟ್ಟ ವಲಯ ಅರಣ್ಯಾಧಿಕಾರಿಗಳ ಮಾರ್ಗದರ್ಶನದಲ್ಲಿ ನೆಡುತೋಪುಗಳ ನಿರ್ವಹಣೆ, ನಿರ್ಮಾಣ, ಇತರೆ ಕಾಮಗಾರಿಗಳನ್ನು ನಿರ್ವಹಿಸತಕ್ಕದ್ದು.
8. ನೆಡುತೋಪುಗಳ ನಿರ್ವಹಣೆ, ನಿರ್ಮಾಣ ಸಸಿ ಬೆಳೆಸುವ ಕೆಲಸಗಳಿಗೆ ಯಾವುದೇ ಮುಂಗಡ ಹಣವನ್ನು ಪಾವತಿ ಮಾಡಲಾಗುವುದಿಲ್ಲ. ಪಾವತಿಸುವ ಹಣದ ಮೇಲೆ ಸಂಬಂಧಿಸಿದ ತೆರಿಗೆಗಳನ್ನು ಕಡಿತ ಮಾಡಲಾಗುವುದು.
9. ಟೆಂಡರ್ ಪ್ರಕಟಣೆಯ ಯಾವುದೇ ನಿಯಮಗಳನ್ನು ಉಲ್ಲಂಘಿಸಿದಲ್ಲಿ ಮರು ಟೆಂಡರು ಕರೆದು ಕೆಲಸ ಮಾಡಿಸುವ ಮತ್ತು ಯಾವುದೇ ಕಾರಣ ಕೊಡದೆ ಇಡೀ ಟೆಂಡರನ್ನು ಮುಟ್ಟುಗೋಲು ಹಾಕಿಕೊಳ್ಳುವ ಅವಕಾಶವನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಕಾಯ್ದಿರಿಸಿಕೊಳ್ಳಲಾಗಿದೆ.
10. ನಿಯಮದಂತೆ ಹಾಗೂ ತಾಂತ್ರಿಕವಾಗಿ ಕರ್ತವ್ಯ ನಿರ್ವಹಿಸಲು ವಿಫಲವಾದ ವಿಜೇತ ಟೆಂಡರುದಾರರ ಇ.ಎಮ್.ಡಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದರ ಜೊತೆಗೆ ಅವರ ಆರ್ಥಿಕ ಜವಾಬ್ದಾರಿಯಲ್ಲಿ ಮರು ಟೆಂಡರು ಕರೆಯಲಾಗುವುದು.
11. ಯಶಸ್ವಿ ಟೆಂಡರುದಾರರು ಆರ್ಥಿಕ ಜವಾಬ್ದಾರಿಯಲ್ಲಿ ಟೆಂಡರನ್ನು ಕರೆದು ಕೆಲಸ ಮಾಡಿಸಿದ್ದಕ್ಕಾಗಿ ಇಲಾಖೆಗೆ ಆರ್ಥಿಕ ನಷ್ಟವುಂಟಾದರೆ ಅಂತಹ ನಷ್ಟವನ್ನು ಮೂಲ ಯಶಸ್ವಿ ಟೆಂಡರುದಾರರು ಕಟ್ಟಿ ಕೊಡಬೇಕಾಗುವುದು.
12. ಈ ಕ್ರಮದಿಂದ ಇಲಾಖೆಗೆ ಆಗಬಹುದಾದ ನಷ್ಟವನ್ನು ಮೂಲ ಯಶಸ್ವಿ ಟೆಂಡರುದಾರರು ಕಟ್ಟಿಕೊಡಲು ವಿಫಲವಾದರೆ, ಸದರಿ ಮೊತ್ತವನ್ನು ಬಾಕಿ ಕಂದಾಯ ರೂಪದಲ್ಲಿ ವಸೂಲಿ ಮಾಡಲು ಕ್ರಮ ಕೈಗೊಳ್ಳಲಾಗುವುದು.
13. ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಆದೇಶದ ಬಗ್ಗೆ ತೃಪ್ತಿಯಿಲ್ಲವಾದರೆ, ಚಾಮರಾಜನಗರ ವೃತ್ತದ ಅರಣ್ಯ ಸಂರಕ್ಷಣಾಧಿಕಾರಿಯವರಲ್ಲಿ ಮೇಲ್ಮನವಿ ಸಲ್ಲಿಸಬಹುದು ಹಾಗೂ ಅವರು ಕೊಡುವ ತೀರ್ಪು ಅಂತಿಮವಾದುದು.
14. ಅರಣ್ಯ ಇಲಾಖೆಯ ಕೆಲಸಗಳು ಮಳೆಯ ಆಧಾರಿತ ಮತ್ತು ಋತುಮಾನದ ಕೆಲಸಗಳಾಗಿರುವುದರಿಂದ ಮಳೆ ಬಿದ್ದ ಕೂಡಲೇ ನೆಡುತೋಪು ನಿರ್ಮಾಣ ಹಾಗೂ ನಿರ್ವಹಣೆ ಕೆಲಸವನ್ನು ಅಗತ್ಯಕ್ಕನುಸಾರವಾಗಿ ಇಲಾಖೆ ವತಿಯಿಂದ ಕೈಗೊಳ್ಳಲಾಗುವುದು ಈ ರೀತಿ ಕೈಗೊಂಡ ಕೆಲಸಗಳನ್ನು ಹೊರತುಪಡಿಸಿ ಗುತ್ತಿಗೆದಾರರು ಉಳಿದ ಕೆಲಸಗಳನ್ನು ಪೂರೈಸಬೇಕಾಗಿರುತ್ತದೆ.
15. ಟೆಂಡರನ್ನು ಅಂಗೀಕರಿಸುವ ಅಥವಾ ನಿರಾಕರಿಸುವ ಅಧಿಕಾರವನ್ನು ಈ ಕೆಳ ಸಹಿ ಮಾಡಿರುವವರಿಗೆ ಅಥವಾ ಮೇಲಾಧಿಕಾರಿಗಳಿಗೆ ಕಾಯ್ದಿರಿಸಲಾಗಿದೆ.
16. ಅರಣ್ಯ ಅಭಿವೃದ್ಧಿ ಕಾಮಗಾರಿಗಳನ್ನು ಟೆಂಡರ್ ಮೂಲಕ ಪಡೆದು ಕೆಲಸ ನಿರ್ವಹಿಸಿರುವ 5 ವರ್ಷಗಳ ಅನುಭವ ಟೆಂಡರುದಾರರಿಗೆ ಇದ್ದು ಅದಕ್ಕೆ ಪೂರಕವಾದ ದಾಖಲೆಗಳನ್ನು ಕಾಮಗಾರಿವಾರು ನೀಡತಕ್ಕದ್ದು.
17. ಟೆಂಡರುದಾರರು ಅರಣ್ಯ ಅಭಿವೃದ್ಧಿ ಕಾಮಗಾರಿಗಳನ್ನು ಪ್ರತಿ ವರ್ಷ ಕನಿಷ್ಟ ರೂ 5 ಲಕ್ಷದಂತೆ ಕಳೆದ 5 ಸಾಲಿನಲ್ಲಿ ಕೈಗೊಂಡಿರುವ ಬಗ್ಗೆ ತಕ್ಕ ದೃಢೀಕೃತ ದಾಖಲಾತಿಗಳನ್ನು ಟೆಂಡರ್‌ಫಾರಂ ಜೊತೆ ಲಗತ್ತಿಸಬೇಕು.
18. ಯಶಸ್ವಿ ಟೆಂಡರುದಾರರು ಕಾಮಗಾರಿಗಳನ್ನು ಅರಣ್ಯಾಧಿಕಾರಿಗಳ ಸಲಹೆ ಹಾಗೂ ಸೂಚನೆಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.
19. ಗುತ್ತಿಗೆದಾರರು ನಿಗಧಿತ ಅವಧಿಯಲ್ಲಿ ಕಾಮಗಾರಿಯನ್ನು ಪೂರೈಸದಿದ್ದಲ್ಲಿ, ಅರ್ಧಕ್ಕೆ ನಿಲ್ಲಿಸಿದಲ್ಲಿ ಗುತ್ತಿಗೆದಾರರು ಪೂರೈಸಿದ ಕಾಮಗಾರಿಯ ಹಣ ಪಾವತಿಗೆ ಗುತ್ತಿಗೆದಾರರು ಅರ್ಹರಿರುವುದಿಲ್ಲ.
20. ಕೆಲಸದಲ್ಲಿ ಏನಾದರೂ ಬದಲಾವಣೆ ಅಥವಾ ಮಿತಿಗೊಳಿಸಿದಲ್ಲಿ ಟೆಂಡರುದಾರರು ಕ್ಲೈಮ್ ಮಾಡಬಹುದಾದ ಯಾವುದೇ ರೀತಿಯ ಪರಿಹಾರಕ್ಕೆ ಇಲಾಖೆ ಬದ್ಧವಾಗಿರುವುದಿಲ್ಲ.
21. ಹೆಚ್ಚಿನ ವಿವರಗಳು ಬೇಕಾದಲ್ಲಿ ಈ ಕಛೇರಿಯ ಕೆಲಸದ ದಿನಗಳಲ್ಲಿ ಪಡೆಯಬಹುದು.

ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಪಿ.ಆರ್. 335 ಕಾವೇರಿ ವನ್ಯಜೀವಿ ವಿಭಾಗ, ಕನಕಪುರ.

**ಜಲ ಸಂಪನ್ಮೂಲ ಇಲಾಖೆ**

**ಕಾರ್ಯಪಾಲಕ ಅಭಿಯಂತರರವರ ಕಛೇರಿ,**

**ನಂ.4, ಬಿ.ಆರ್.ಎಲ್.ಬಿ.ಸಿ. ವಿಭಾಗ, ಭದ್ರಾವತಿ**

**ಟೆಂಡರ್ ಅವಧಿ ವಿಸ್ತರಣೆ ಪ್ರಕಟಣೆ**

**ನಂ. ಕಾ.ಇಂ/ ಬಿ.ಡಿಎನ್-4/ಟೆಂಡರ್/ಪಿ.ಬಿ-3/2006-07, 600/11, ದಿನಾಂಕ: 2ನೇ ಜೂನ್ 2006**

**ವಿಷಯ:** ಮೈಸೂರು ಪೇಪರ್ ಮಿಲ್ಸ್ ಸಕ್ಕರೆ ಕಾರ್ಖಾನೆಯ ರಸ್ತೆ ನಿರ್ಮಾಣದ ಟೆಂಡರ್ ಕಾಮಗಾರಿಗಳು.

**ಉಲ್ಲೇಖ:** 1. ಈ ಕಛೇರಿ ಟೆಂಡರ್ ಪ್ರಕಟಣೆ ಸಂಖ್ಯೆ ಕಾ.ಇಂ/ಬಿಡಿಎನ್-4/ಪಿ.ಬಿ.-3/ಟೆಂಡರ್ ಪ್ರಕಟಣೆ/2005-06 3743 ದಿನಾಂಕ: 29.3.06.

2. ಟೆಂಡರ್ ಅವಧಿ ವಿಸ್ತರಣೆ ಪ್ರಕಟಣೆ ಸಂಖ್ಯೆ 294/11 ದಿನಾಂಕ: 2.5.06.

ಮೇಲ್ಕಂಡ ಉಲ್ಲೇಖಿತ ಪತ್ರದಲ್ಲಿ ಈ ಕಛೇರಿಯಿಂದ ಪ್ರಕಟಿಸಲಾದ ಮೈಸೂರು ಪೇಪರ್ ಮಿಲ್ಸ್ ಸಕ್ಕರೆ ಕಾರ್ಖಾನೆಯ ರಸ್ತೆ ನಿರ್ಮಾಣದ ಟೆಂಡರ್ ಕಾಮಗಾರಿಗಳಿಗೆ ಸಂಬಂಧಿಸಿದಂತೆ, ಪ್ರಕಟಿಸಿದ ಟೆಂಡರುಗಳಿಗೆ ಈ ಕೆಳಕಂಡಂತೆ ಟೆಂಡರ್ ಅವಧಿ ವಿಸ್ತರಣೆ ಮಾಡಲಾಗಿದೆ.

1) ನಿಗದಿತ ಖಾಲಿ ಟೆಂಡರ್ ಫಾರಂಗಳನ್ನು ಕೋರಿ ಅರ್ಜಿಯನ್ನು ಸಲ್ಲಿಸುವ ಕೊನೆಯ ದಿ:30.6.2006 ಸಂಜೆ 5.30 ರವರೆಗೆ
2) ಖಾಲಿ ಟೆಂಡರ್ ಫಾರಂಗಳನ್ನು ಕೊಡುವ ದಿನಾಂಕ: 3.7.2006 ಸಂಜೆ 5.30 ರವರೆಗೆ
3) ತುಂಬಿದ ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ 4.7.2006 ಸಂಜೆ 4.00 ರವರೆಗೆ

ಟೆಂಡರ್ ಫಾರಂಗಳನ್ನು ದಿ:4.7.2006 ಸಂಜೆ 4-30 ಗಂಟೆಗೆ ಅಥವಾ ಇನ್ನಾವುದೇ ದಿನದಂದು ಕಛೇರಿಯಲ್ಲಿ ಹಾಜರಿರುವ ಟೆಂಡರ್‌ದಾರರ ಅಥವಾ ಇನ್ನಾವುದೇ ನೊಂದಾಯಿತ ಗುತ್ತಿಗೆದಾರರ ಸಮಕ್ಷಮದಲ್ಲಿ ತೆರೆಯಲಾಗುವುದು.

ಉಳಿದ ನಿಬಂಧನೆಗಳಲ್ಲಿ ಯಾವುದೇ ಬದಲಾವಣೆಗಳಿರುವುದಿಲ್ಲ.

**ಎಸ್.ಹೆಚ್. ಮಂಜಪ್ಪ**
ಕಾರ್ಯಪಾಲಕ ಅಭಿಯಂತರು,
ನಂ.4, ಬಿ.ಆರ್.ಎಲ್.ಬಿ.ಸಿ. ವಿಭಾಗ ಭದ್ರಾವತಿ.

ಪಿ.ಆರ್. 320

## ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಸಾಗರ ವಿಭಾಗ, ಸಾಗರ

**ಕಿರು ಅರಣ್ಯ ಉತ್ಪನ್ನ ಮರು-ಟೆಂಡರ್ ಕಂ ಹರಾಜು ಮಾರಾಟ ಸಂಕ್ಷಿಪ್ತ ಪ್ರಕಟಣೆ**

**ಕ್ರ: ಎ4.ಎಂ.ಎಫ್‌ಪಿ.ಸಿಆರ್-02/06-07, ದಿನಾಂಕ: 3ನೇ ಜೂನ್ 2006**

ಈ ಮೂಲಕ ಸಾರ್ವಜನಿಕರ ಅವಗಾಹನೆಗೆ ತಿಳಿಯಪಡಿಸುವುದೇನೆಂದರೆ ದಿನಾಂಕ: 1.7.2006 ರಿಂದ 30.6.2008ರವರೆಗೆ ಎರಡು ವರ್ಷಗಳ ಅವಧಿಗೆ ಸಾಗರ ವಿಭಾಗದ ಈ ಕೆಳಕಂಡ ವಲಯಗಳಲ್ಲಿನ ಮೀಸಲು ಅರಣ್ಯಗಳು ಮತ್ತು ಸಣ್ಣಕಾಡುಗಳು, ಎಲ್ಲಾ ಸಣ್ಣ ಮತ್ತು ದೊಡ್ಡ ಕೆರೆ ದಂಡೆಗಳು, ಅರಣ್ಯ ಇಲಾಖೆಯ ಆಡಳಿತಕ್ಕೆ ಒಳಪಟ್ಟಿರುವ ಎಲ್ಲಾ ರಸ್ತೆಯ ಬದಿಯ ಮರಗಳು, ಕಾಯ್ದಿಟ್ಟ ಅರಣ್ಯ, ಸಣ್ಣ ಕಾಡುಗಳು, ಜಿಲ್ಲಾ ಕಾಡು (ಆಯಾ ವಲಯಗಳ ವ್ಯಾಪ್ತಿಗೆ ಒಳಪಟ್ಟಂತೆ ಮಾತ್ರ) ಮುಕ್ತ ಸರ್ಕಾರಿ ಜಮೀನು (ಮುಫತ್ ಮತ್ತು ಜಾಡಿ) ಕಾಡುಗಳಿಂದ ಈ ಕೆಳಗೆ ಸೂಚಿಸಿರುವ ತಪಶೀಲಿನಂತೆ ಗುತ್ತಿಗೆಯನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಸಾಗರ ಅಥವಾ ಅವರಿಂದ ನಿಯೋಜಿತರಾದ ಮರು ಟೆಂಡರ್ ಕಂ ಹರಾಜು ಮೂಲಕ ವಿಕ್ರಯಿಸಲ್ಪಡುತ್ತದೆ. ಸದರಿ ಟೆಂಡರ್ ಕಂ ಹರಾಜಿನಲ್ಲಿ ಇಲಾಖೆಯಿಂದ ತಪ್ಪಿತಸ್ಥರಾದ ಗುತ್ತಿಗೆದಾರರು ಭಾಗವಹಿಸಲು ಅನರ್ಹರಿರುತ್ತಾರೆ.

**ತಪಶೀಲು**

| ಕ್ರ. ಸಂ. | ಯೂನಿಟ್ ನಂ | ವಲಯದ ಹೆಸರು | ಗುತ್ತಿಗೆಯ ಬಾಪ್ತಿನ ವಿವರ | ಗುತ್ತಿಗೆಯ ಅವಧಿ | ಟೆಂಡರ್ ಸ್ವೀಕರಿಸುವ ದಿನಾಂಕ ಮತ್ತು ವೇಳೆ | ಹರಾಜು ಮಾಡುವ ದಿನಾಂಕ ಮತ್ತು ವೇಳೆ | ಮುಂಗಡ ಠೇವಣಿ (ರೂ) |
|---|---|---|---|---|---|---|---|
| 1 | 2 | ಸಾಗರ | ದಾಲ್ಚಿನ್ನಿ ಎಲೆಗಳು | 1.7.2006 ರಿಂದ 30.6.2008ರವರೆಗೆ ಅಥವಾ ಕರಾರು ಆದ ದಿನಾಂಕದಿಂದ 30.6.2008ರವರೆಗೆ | 30.6.06ರಂದು ಮಧ್ಯಾಹ್ನ 3.00 ಗಂಟೆಯವರೆಗೆ | 30.6.06ರ ಮಧ್ಯಾಹ್ನ 3.30ರ ನಂತರ | 2000-00 |
| 2 | 3 | ಸಾಗರ | ಜೇನುತುಪ್ಪ ಮತ್ತು ಮೇಣ | -do- | -do- | -do- | 2000-00 |
| 3 | 5 | ಕಾರ್ಗಲ್ | ದಾಲ್ಚಿನ್ನಿ ಎಲೆಗಳು | -do- | -do- | -do- | 2000-00 |
| 4 | 6 | ಕಾರ್ಗಲ್ | ಜೇನುತುಪ್ಪ ಮತ್ತು ಮೇಣ | -do- | -do- | -do- | 2000-00 |
| 5 | 8 | ಸೊರಬ | ದಾಲ್ಚಿನ್ನಿ ಎಲೆಗಳು | -do- | -do- | -do- | 2000-00 |
| 6 | 11 | ಹೊಸನಗರ | ದಾಲ್ಚಿನ್ನಿ ಎಲೆಗಳು | -do- | -do- | -do- | 2000-00 |
| 7 | 13 | ನಗರ | ದಾಲ್ಚಿನ್ನಿ ಎಲೆಗಳು | -do- | -do- | -do- | 2000-00 |
| 8 | 4 | ಸಾಗರ | ಹಾಲುಮಡ್ಡಿ ಮತ್ತು ಮೇಣ | -do- | -do- | -do- | 2000-00 |
| 9 | 15 | ನಗರ | ಹಾಲುಮಡ್ಡಿ ಮತ್ತು ಮೇಣ | -do- | -do- | -do- | 2000-00 |

**ಷರಾ:** ಹಾಲುಮಡ್ಡಿ ಯುನಿಟ್‌ಗಳನ್ನು ಮೇಲಾಧಿಕಾರಿಗಳ ಮಂಜೂರಾತಿ ದೊರೆತಲ್ಲಿ ಮಾತ್ರ ಟೆಂಡರ್ ಕಂ ಬಹಿರಂಗ ಹರಾಜು ಮಾಡಲಾಗುವುದು.

**ಷರತ್ತುಗಳು:**

1) ಸಾಗರ ವಿಭಾಗದಲ್ಲಿ ಅರಣ್ಯ ಗುತ್ತಿಗೆದಾರರಾಗಿ ನಿಮ್ಮ ಹೆಸರುಗಳನ್ನು ಪ್ರಸಕ್ತ ಸಾಲಿನಲ್ಲಿ ನೊಂದಾಯಿಸಿದವರು ಮಾತ್ರ ಮರು ಟೆಂಡರ್ ಕಂ ಹರಾಜಿನಲ್ಲಿ ಭಾಗವಹಿಸಲು ಅವಕಾಶ ಇದೆ.
2) ಟೆಂಡರ್ ಫಾರಂನ ಬೆಲೆ ರೂ 12-00 ಮತ್ತು ತೆರಿಗೆಗಳನ್ನು ಪಾವತಿಸಿ ಫಾರಂಗಳನ್ನು ಟೆಂಡರ್ ದಿನದಂದು ಪಡೆಯಬಹುದು. ಟೆಂಡರ್ ಫಾರಂಗಳನ್ನು ವರ್ಗಾಯಿಸಲು ಬರುವುದಿಲ್ಲ. ಟೆಂಡರ್ ಫಾರಂಗಳನ್ನು ಹರಾಜಿನ ದಿನ 1-00 ಗಂಟೆಯವರೆಗೆ ಕಛೇರಿಯಲ್ಲಿ ಕೊಡಲಾಗುತ್ತದೆ.
3) ಹರಾಜಿನ ದಿನವೇ ಹೆಚ್ಚಿನ ಸವಾಲುದಾರರು ಗುತ್ತಿಗೆಯ ಅರ್ಧ ಭಾಗದ ಹಣ ಮತ್ತು ಪೂರ್ಣ ಗುತ್ತಿಗೆಯ ಹಣದ ಮೇಲೆ ಚಾಲ್ತಿಯಲ್ಲಿರುವ ತೆರಿಗೆಗಳನ್ನು (ವರಮಾನ ತೆರಿಗೆ ಸೇರಿದಂತೆ) ಸಂದಾಯ ಮಾಡಬೇಕು. ಉಳಿದ ಅರ್ಧಭಾಗದ ಗುತ್ತಿಗೆ ಹಣವನ್ನು ಗುತ್ತಿಗೆ ಕರಾರು ಮಾಡುವಾಗ ಸಂದಾಯ ಮಾಡಬೇಕು.

4) ಗುತ್ತಿಗೆದಾರರು ಟೆಂಡರ್ ಜೊತೆಯಲ್ಲಿ ನಿಗಧಿಪಡಿಸಿದ ಇ.ಎಂ.ಡಿ.ಯನ್ನು ಡಿ.ಡಿ. ರೂಪದಲ್ಲಿ ಮಾತ್ರ ಪಾವತಿಸಬೇಕು. ಡಿ.ಡಿ. ಮುಖಾಂತರ ಪಾವತಿಸದಿದ್ದ ಟೆಂಡರ್ ಫಾರಂಗಳನ್ನು ಸ್ವೀಕರಿಸಲಾಗುವುದಿಲ್ಲ. ಮತ್ತು ಸೇಲ್ಸ್ ಟ್ಯಾಕ್ಸ್ ಇನ್ಕಂಟ್ಯಾಕ್ಸ್ ಮತ್ತು ಸಾಲ್ವೆನ್ಸಿಸರ್ಟಿಫಿಕೇಟುಗಳನ್ನು ನಿಯಮಕ್ಕೆ ಅನುಸಾರವಾಗಿ ಲಗತ್ತಿಸಿರಬೇಕು.

5) ತಪ್ಪಿತಸ್ಥ ಗುತ್ತಿಗೆದಾರರು ಮರು ಟೆಂಡರ್ ಕಂ ಹರಾಜಿನಲ್ಲಿ ಭಾಗವಹಿಸುವುದನ್ನು ನಿಷೇಧಿಸಿದೆ.

6) ರಾಷ್ಟ್ರೀಯ ಉದ್ಯಾನವನ ಮತ್ತು ವನ್ಯಜೀವಿ ಅಭಯಾರಣ್ಯದಲ್ಲಿ ಕಿರುಕಾಡು ಉತ್ಪನ್ನದ ಸಂಗ್ರಹಣೆಯನ್ನು ನಿಷೇಧಿಸಲಾಗಿದೆ.

7) ಜಯಶೀಲರಾದ ಗುತ್ತಿಗೆದಾರರು ಅದೇ ದಿನದಂದು ಶೇಕಡ 50 ಭಾಗದ ಗುತ್ತಿಗೆ ಹಣ ಮತ್ತು ಪೂರ್ಣ ತೆರಿಗೆಗಳನ್ನು ಪಾವತಿಸತಕ್ಕದ್ದು. ಬಾಕಿ ಉಳಿದ ಶೇಕಡ 50 ಭಾಗದ ಹಣವನ್ನು ಸ್ಥಿರೀಕರಣದ ಆದೇಶ ತಲುಪಿದ ನಂತರದಲ್ಲಿ 15 (ಹದಿನೈದು) ದಿನದೊಳಗಾಗಿ ಪಾವತಿಸತಕ್ಕದ್ದು. ತಪ್ಪಿದ್ದಲ್ಲಿ ಬಾಕಿ ಹಣಕ್ಕೆ ಬಡ್ಡಿಯನ್ನು ವಸೂಲಿ ಮಾಡಲು ಕ್ರಮ ಜರುಗಿಸಲಾಗುವುದು.

8) ಹರಾಜಿನಲ್ಲಿ ಟೆಂಡರ್‌ದಾರರ: ಬಿಡ್ಡುದಾರರ ಸವಾಲನ್ನು ಸ್ವೀಕರಿಸುವ ತಿರಸ್ಕರಿಸುವ ಅಥವಾ ತಿದ್ದುಪಡಿ ಮಾಡುವ ಹಕ್ಕನ್ನು ಕಾಯ್ದಿರಿಸಿಕೊಂಡಿರುತ್ತದೆ.

9) ಅನಿವಾರ್ಯ ಕಾರಣಗಳಿಂದಾಗಿ ಹರಾಜನ್ನು ಮುಂದೂಡುವ: ರದ್ದುಪಡಿಸುವ: ತಿರಸ್ಕರಿಸುವ ಅಧಿಕಾರವನ್ನು ಕಾಯ್ದಿರಿಸಿಕೊಂಡಿದೆ.

10) ಹೆಚ್ಚಿನ ವಿವರಗಳನ್ನು ಈ ಕಛೇರಿಯಿಂದ ಕಛೇರಿಯ ವೇಳೆಯಲ್ಲಿ ಪಡೆದುಕೊಳ್ಳಬಹುದು.

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ

ಪಿ.ಆರ್. 329

## ಪೊಲೀಸ್ ಮಹಾನಿರೀಕ್ಷಕರ ಕಛೇರಿ, ಕರಾವಳಿ ಕಾವಲು ಪೊಲೀಸ್, ಉಡುಪಿ

### ಅಧಿಸೂಚನೆ

**ಸಂಖ್ಯೆ:47:ವಾ.ಸಾ.ವಿ:ಕ.ಕಾ.ಪೊ:ಉ:2006-07, ದಿನಾಂಕ: 1ನೇ ಜೂನ್ 2006**

**ವಿಷಯ:** ವಾಹನಗಳ ನಿರುಪಯುಕ್ತಗೊಳಿಸಲಾದ ಟಯರ್, ಟ್ಯೂಬ್, ಬ್ಯಾಟರಿ ಇತ್ಯಾದಿ ಬಿಡಿಭಾಗಗಳನ್ನು ಟೆಂಡರ್ ಕಂ. ಬಹಿರಂಗ ಹರಾಜಿನಲ್ಲಿ ಸಾರ್ವಜನಿಕರಿಗೆ ದಿನಾಂಕ 25.7.2006 ರಂದು ವಿಲೇವಾರಿ ಮಾಡುವ ಕುರಿತು.

**ಉಲ್ಲೇಖ:** ಮಹಾನಿರ್ದೇಶಕರು ಮತ್ತು ಪೊಲೀಸ್ ಮಹಾನಿರೀಕ್ಷಕರು, ಕರ್ನಾಟಕ ರಾಜ್ಯ ಬೆಂಗಳೂರುರವರ ಆದೇಶ ಸಂಖ್ಯೆ:ವಾ.ಸಾ(1) 58:2002-2003 ದಿನಾಂಕ: 8.7.2005.

ಸಾರ್ವಜನಿಕರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಉಲ್ಲೇಖಿತ ಆದೇಶದಲ್ಲಿ ವಾಹನಗಳ ನಿರುಪಯುಕ್ತಗೊಳಿಸಲಾಗಿರುವ ಟಯರ್, ಟ್ಯೂಬ್, ಬ್ಯಾಟರಿ ಇತ್ಯಾದಿ ಬಿಡಿಭಾಗಗಳನ್ನು ಕರಾವಳಿ ಕಾವಲು ಪೊಲೀಸ್, ಉಡುಪಿ, ಎನ್.ಹೆಚ್. 17, ಬಿ.ಕೆ. ಶೆಟ್ಟಿ, ಕಾಂಪೌಂಡ್, ಕಿನ್ನಿಮೂಲ್ಕಿ ಕಛೇರಿಯ ಆವರಣದಲ್ಲಿ ದಿನಾಂಕ: 25.7.2006 ರಂದು 10.30 ಗಂಟೆಗೆ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ಆಸಕ್ತಿಯುಳ್ಳ ಸಾರ್ವಜನಿಕರು ಬಹಿರಂಗ ಹರಾಜಿನಲ್ಲಿ ಭಾಗವಹಿಸಿ ಖರೀದಿಸಬಹುದಾಗಿದೆ.

ಟೆಂಡರ್ ಕಂ. ಬಹಿರಂಗ ಹರಾಜನ್ನು ಈ ಕೆಳಗೆ ತಿಳಿಸಿದ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟಂತೆ ನಡೆಸಲಾಗುವುದು.

1. ಈ ನಿರುಪಯುಕ್ತ ವಾಹನಗಳ ಟಯರ್, ಟ್ಯೂಬ್, ಬ್ಯಾಟರಿ ಇತ್ಯಾದಿ ಬಿಡಿಭಾಗಗಳನ್ನು ಪೊಲೀಸ್ ಮಹಾನಿರೀಕ್ಷಕರು, ಕರಾವಳಿ ಕಾವಲು ಪೊಲೀಸ್ ಕಛೇರಿ ಉಡುಪಿ ಆವರಣದಲ್ಲಿಟ್ಟಿದ್ದು, ಕಛೇರಿಯ ಯಾವುದೇ ದಿನಗಳಂದು ಸಾರ್ವಜನಿಕರು ನೋಡಬಹುದು.
2. ಹರಾಜಿನಲ್ಲಿ ಭಾಗವಹಿಸಲು ಇಚ್ಚಿಸುವ ಪ್ರತಿಯೊಬ್ಬರು ರೂ. 1000/-(ರೂ ಒಂದು ಸಾವಿರಗಳು ಮಾತ್ರ) ಠೇವಣಿ ಹಣವನ್ನು ಹರಾಜಿಗೆ ಮುನ್ನ ನಗದಾಗಿ ಪಾವತಿಸತಕ್ಕದ್ದು. ಠೇವಣಿ ಪಾವತಿಸದವರು ಹರಾಜಿನಲ್ಲಿ ಭಾಗವಹಿಸುವಂತಿಲ್ಲ.
3. ಟೆಂಡರುಗಳನ್ನು ಸಲ್ಲಿಸ ಬಯಸುವ ಸಾರ್ವಜನಿಕರು ಮೊಹರು ಮಾಡಿದ ಲಕೋಟೆಗಳನ್ನು ಪೊಲೀಸ್ ಮಹಾನಿರೀಕ್ಷಕರು, ಕರಾವಳಿ ಕಾವಲು ಪೊಲೀಸ್, ಉಡುಪಿ ಇವರ ವಿಳಾಸಕ್ಕೆ ಲಕೋಟೆಯ ಮೇಲೆ 'ನಿರುಪಯುಕ್ತ ಬಿಡಿ ಭಾಗಗಳಿಗಾಗಿ' ಎಂದು ಸ್ಪಷ್ಟವಾಗಿ ನಮೂದಿಸಿ ಖುದ್ದಾಗಿ ಇಲ್ಲವೇ ಅಂಚೆ ಮೂಲಕ ದಿನಾಂಕ: 15.7.2006ರ ಒಳಗಾಗಿ ಈ ಕಛೇರಿಗೆ ತಲುಪುವಂತೆ, ಸಲ್ಲಿಸತಕ್ಕದ್ದು.
4. ಪ್ರತೀ ಟೆಂಡರುದಾರರು ರೂ. 1000/- (ರೂ ಒಂದು ಸಾವಿರ ರೂಪಾಯಿಗಳು) ಪೊಲೀಸ್ ಮಹಾನಿರೀಕ್ಷಕರು, ಕರಾವಳಿ ಕಾವಲು ಪೊಲೀಸ್, ಉಡುಪಿ. ಇವರ ಹೆಸರಿನಲ್ಲಿ ತಿಳಿಸಿದ ಡಿಡಿಯನ್ನು ಲಗತ್ತಿಸಬೇಕು. ಹರಾಜಿನಲ್ಲಿ ಭಾಗವಹಿಸುವ ಸಾರ್ವಜನಿಕರೂ ಸಹ, ಠೇವಣಿ ಹಣವನ್ನು ಹರಾಜಿಗೆ ಮುಂಚಿತವಾಗಿ ಪಾವತಿ ಮಾಡಿರತಕ್ಕದ್ದು.
5. ಟೆಂಡರ್ ಫಾರಂನಲ್ಲಿ ಬಿಡ್ಡು ಮೊತ್ತವನ್ನು ಅಂಕಿ ಮತ್ತು ಅಕ್ಷರ ಎರಡರಲ್ಲಿಯೂ ಸ್ಪಷ್ಟವಾಗಿ ನಮೂದಿಸಿರಬೇಕು. ಏನಾದರೂ ತಿದ್ದುಪಡಿ ಮಾಡಿದ್ದಲ್ಲಿ ಟೆಂಡರುದಾರರು ತಮ್ಮ ಪೂರ್ಣ ಸಹಿ ಮಾಡಿ ತಿದ್ದುಪಡಿಯನ್ನು ದೃಢೀಕರಿಸಬೇಕು.
6. ಟೆಂಡರು ಫಾರಂಗಳನ್ನು ವರ್ಗಾವಣೆ ಮಾಡಲಾಗದು.
7. ಸ್ವೀಕೃತವಾದ ಟೆಂಡರ್ ಲಕೋಟೆಗಳನ್ನು ಪೊಲೀಸ್ ಮಹಾನಿರೀಕ್ಷಕರು, ಕರಾವಳಿ ಕಾವಲು ಪೊಲೀಸ್, ಉಡುಪಿ. ಅವರಾಗಲೀ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಯಾಗಲೀ ಸಾರ್ವಜನಿಕರ ಸಮ್ಮುಖದಲ್ಲಿ ಕರೆದು ಬಹಿರಂಗಪಡಿಸುವುದು. ಹರಾಜಿನಲ್ಲಿ ದಾಖಲಾದ ಅತೀ ಹೆಚ್ಚಿನ ಬೆಲೆ ಅಥವಾ ಟೆಂಡರಿನಲ್ಲಿ ದಾಖಲಿಸಿದ ಅತೀ ಹೆಚ್ಚಿನ ಬೆಲೆ ಇವೆರಡರಲ್ಲಿ ಅತೀ ಹೆಚ್ಚಿನ ದರ ದಾಖಲಿಸಿದವರನ್ನು ಯಶಸ್ವಿ ಟೆಂಡರ್ ಬಿಡ್‌ದಾರರೆಂದು ಪರಿಗಣಿಸಲಾಗುವುದು.
8. ಯಶಸ್ವಿ ಟೆಂಡರು ಬಿಡ್ಡುದಾರರು ಅಂಗೀಕೃತ ಹೆಚ್ಚಿನ ಬೆಲೆಯಲ್ಲಿ ಶೇಕಡ 25% ರಷ್ಟು ಹಣವನ್ನು ಹರಾಜಿನ ಸ್ಥಳದಲ್ಲಿ ಹರಾಜಿನ ದಿನವೇ ತುಂಬತಕ್ಕದ್ದು. ಈ ಹಣಕ್ಕೆ ಯಾವುದೇ ಬಡ್ಡಿ ನೀಡಲಾಗದು. ಮಹಾನಿರ್ದೇಶಕರು ಹಾಗೂ ಆರಕ್ಷಕ ಮಹಾನಿರೀಕ್ಷಕರು, ಕರ್ನಾಟಕ ರಾಜ್ಯ ಬೆಂಗಳೂರು. ಇವರಿಂದ ವಿಲೇವಾರಿ ಒಪ್ಪಿಗೆ ಬಂದ ನಂತರವೇ ಉಳಿದ ಹಣವನ್ನು ಬಿಡ್‌ದಾರರಿಂದ ಕಟ್ಟಿಸಿಕೊಂಡು ಹರಾಜು

ಮಾಡಿದವರಿಗೆ ವಾಹನದ ನಿರುಪಯುಕ್ತಗೊಳಿಸಿದ ಟಯರ್ ಟ್ಯೂಬ್, ಬ್ಯಾಟರಿ, ಇತ್ಯಾದಿ ಬಿಡಿಭಾಗಗಳನ್ನು ವಹಿಸಿಕೊಡಲಾಗುವುದು. ಈ ವಾಹನವನ್ನು ಯಶಸ್ವಿ ಬಿಡ್ಡುದಾರರು ತಮ್ಮ ಸ್ವಂತ ಖರ್ಚಿನಲ್ಲಿ ತೆಗೆದುಕೊಂಡು ಹೋಗುವುದು.

9. ಎಲ್ಲಾ ಹಣವನ್ನು ಪೊಲೀಸ್ ಮಹಾನಿರೀಕ್ಷಕರು, ಕರಾವಳಿ ಕಾವಲು ಪೊಲೀಸ್, ಉಡುಪಿ ಇವರ ಕಛೇರಿಯ ನಗದು ಶಾಖೆಯಲ್ಲಿ ನಗದಾಗಿಯೇ ತುಂಬಬೇಕು. ಚೆಕ್ ಅಥವಾ ಡಿಡಿ ಮೂಲಕ ಹಣ ಸ್ವೀಕರಿಸುವುದಿಲ್ಲ.
10. ಹರಾಜು ಮಾಡಿದ ನಂತರ ಯಶಸ್ವಿಯಾಗದ ಟೆಂಡರು ಬಿಡ್‌ದಾರರ ಠೇವಣಿ ಹಣವನ್ನು ಕೂಡಲೇ ಹಿಂತಿರುಗಿಸಲಾಗುವುದು. ಹರಾಜಿನಲ್ಲಿ ಭಾಗವಹಿಸುವ ಸಾರ್ವಜನಿಕರು ಇಲಾಖಾ ನಿಯಮಗಳಿಗೆ ಬದ್ಧರಾಗಿರುತ್ತಾರೆ.
11. ಹರಾಜಿನಲ್ಲಿ ಯಾವುದೇ ಸವಾಲನ್ನು ಯಾವುದೇ ಕಾರಣಕ್ಕಾಗಿ ರದ್ದು ಮಾಡುವ ಇಲ್ಲವೇ ತಿರಸ್ಕರಿಸುವ ಅಧಿಕಾರವನ್ನು ಪೊಲೀಸ್ ಮಹಾನಿರೀಕ್ಷಕರು, ಕರಾವಳಿ ಕಾವಲು ಪೊಲೀಸ್, ಉಡುಪಿ, ಇವರು ಹೊಂದಿರುತ್ತಾರೆ. ಮತ್ತು ಅವರ ತೀರ್ಮಾನವೇ ಅಂತಿಮವಾದದ್ದು.
12. ಟೆಂಡರು ಹರಾಜಿನಲ್ಲಿ ಭಾಗವಹಿಸಿದ ಯಶಸ್ವಿಯಾಗದ ಟೆಂಡರು ಬಿಡ್ಡುದಾರರು ತಮ್ಮ ತಪ್ಪು ಗ್ರಹಿಕೆಯಿಂದ ಇಲಾಖೆಗೆ ನಷ್ಟವಾಗುವಂತಹ ಸಂದರ್ಭ ಉದ್ಭವಿಸಿದಲ್ಲಿ ಅಂತಹವರು ಮುಂಗಡವಾಗಿ ಪಾವತಿಸಿದ ಹಣದಲ್ಲಿ ನಷ್ಟವನ್ನು ವಸೂಲಿ ಮಾಡಿಕೊಳ್ಳುವ ಅಧಿಕಾರವನ್ನು ಕಾಯ್ದಿರಿಸಲಾಗಿದೆ. ಈ ರೀತಿ ವಸೂಲಿ ಮಾಡಲು ತೀರ್ಮಾನಿಸಿದ ಹಣವನ್ನು ಸ್ಥಳದಲ್ಲಿಯೇ ಪಾವತಿಸತಕ್ಕದ್ದು. ತಪ್ಪಿದಲ್ಲಿ ಸಂಬಂಧಪಟ್ಟವರ ವಿರುದ್ಧ ಕಾನೂನು ರೀತಿಯ ಕ್ರಮ ಜರುಗಿಸಲಾಗುವುದು.
13. ಹರಾಜಿನಲ್ಲಿ ಭಾಗವಹಿಸುವ ಎಲ್ಲಾ ಬಿಡ್ಡುದಾರರು ತಮ್ಮ ಸಂಪೂರ್ಣ ವಿಳಾಸವನ್ನು ಬರೆದಿರುವ ಚೀಟಿಯೊಂದಿಗೆ ಠೇವಣಿ ಹಣವನ್ನು ಪಾವತಿ ಮಾಡತಕ್ಕದ್ದು.
14. ಮೇಲೆ ತಿಳಿಸಿರುವ ಹರಾಜಿನ ವಿಷಯದಲ್ಲಿ ಯಾವುದೇ ವಾದ, ವಿವಾದ ಉಂಟಾದಲ್ಲಿ ಪೊಲೀಸ್ ಮಹಾನಿರೀಕ್ಷಕರು, ಕರಾವಳಿ ಕಾವಲು ಪೊಲೀಸ್, ಉಡುಪಿ ಇವರು ಮಾಡುವ ನಿರ್ಣಯವೇ ಅಂತಿಮವಾಗಿರುತ್ತದೆ.
15. ಭರ್ತಿ ಮಾಡಿದ ಟೆಂಡರ್ ಫಾರಂಗಳಲ್ಲಿ ಟೆಂಡರ್‌ದಾರರು ತಮ್ಮ ಸಂಪೂರ್ಣ ವಿಳಾಸವನ್ನು ಸ್ಪಷ್ಟವಾಗಿ ನಮೂದಿಸಿರಬೇಕು. ಟೆಂಡರ್ ಫಾರಂ ನಮೂನೆಯನ್ನು ಇದರೊಂದಿಗೆ ಲಗತ್ತಿಸಿದೆ.

ಪೊಲೀಸ್ ಇನ್ಸ್‌ಪೆಕ್ಟರ್ ಜನರಲ್
ಕೋಸ್ಟಲ್ ಸೆಕ್ಯುರಿಟಿ ಪೊಲೀಸ್, ಉಡುಪಿ, ಮಲ್ಪೆ.

**"ಟೆಂಡರ್ ಫಾರಂ ನಮೂನೆ"**
**"ನಿರುಪಯುಕ್ತ ವಾಹನಗಳಿಗೆ ಟೆಂಡರ್"**

ರಿಗೆ,

ಪೊಲೀಸ್ ಮಹಾನಿರೀಕ್ಷಕರು,
ಕರಾವಳಿ ಕಾವಲು ಪೊಲೀಸ್,
ಉಡುಪಿ.

ಮಾನ್ಯರೇ,

ತಮ್ಮ ಕಛೇರಿಯ ಅಧಿಸೂಚನೆ ಸಂಖ್ಯೆ:ವಾ.ಸ.ವಿ/ಕ.ಕಾ.ಪೊ/2006-07. ದಿ:1.6.2006ರಲ್ಲಿ ತಿಳಿಸಿರುವ ವಾಹನಗಳ ನಿರುಪಯುಕ್ತ ಟಯರ್, ಟ್ಯೂಬ್, ಬ್ಯಾಟರಿ, ಇತ್ಯಾದಿ ಬಿಡಿಭಾಗಗಳನ್ನು ರೂ---------------(ಅಕ್ಷರಗಳಲ್ಲಿ ರೂ----------------------------------) ಗಳಿಗೆ ಖರೀದಿಸಲು ನಾನು ಇಚ್ಛಿಸಿರುತ್ತೇನೆ.

ಸ್ಥಳ: ತಮ್ಮ ವಿಶ್ವಾಸಿ
ದಿನಾಂಕ: ( )
ಪಿ.ಆರ್. 333 ಟೆಂಡರುದಾರರ ಪೂರ್ಣ ಅಂಚೆ ವಿಳಾಸ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
## ಟೆಂಡರ್ ಅಧಿಸೂಚನೆ
### ಸಂಖ್ಯೆ: ಸಿಆಸುಇ 5 ಡಿಎಸ್‌ಡಬ್ಲ್ಯೂ 2006, ಬೆಂಗಳೂರು, ದಿನಾಂಕ: 17ನೇ ಮೇ 2006

ವಿಕಾಸಸೌಧ ಕಟ್ಟಡದಲ್ಲಿ ಸಚಿವಾಲಯ ಉಪಾಹಾರ ಮಂದಿರವನ್ನು ಒಂದು ವರ್ಷದ ಅವಧಿಗೆ ನಡೆಸುವ ಬಗ್ಗೆ ಪ್ರಸಿದ್ಧ ಹೋಟೆಲ್ ಸಂಸ್ಥೆಗಳು / ವ್ಯಕ್ತಿಗಳಿಂದ ಟೆಂಡರ್‌ನ್ನು ಕರೆಯಲಾಗಿದೆ.

1) ಟೆಂಡರ್ ನಮೂನೆಯ ದರ ರೂ.500 + ಶೇ.12.5 ಮಾರಾಟ ತೆರಿಗೆ, ಈ ರೀತಿ ಒಟ್ಟು ರೂ.563/-ಕ್ಕೆ ಬ್ಯಾಂಕ್ ಡ್ರಾಫ್ಟ್‌ನ್ನು "ಅಧೀನ ಕಾರ್ಯದರ್ಶಿ, ಸಿಆಸುಇ (ಲೆಕ್ಕಪತ್ರ), ಬೆಂಗಳೂರು" ಇವರ ಹೆಸರಿಗೆ ಪಡೆದುಕೊಂಡು, ಟೆಂಡರ್ ನಮೂನೆಯನ್ನು "ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಕಾರ್ಯಕಾರಿ-1), ಕೊಠಡಿ ಸಂಖ್ಯೆ: 23, ನೆಲಮಹಡಿ, ವಿಧಾನಸೌಧ, ಬೆಂಗಳೂರು", ಇಲ್ಲಿಂದ ಪಡೆಯಬಹುದಾಗಿದೆ.
2) ವಿಕಾಸಸೌಧ ಕಟ್ಟಡದ 1ನೇ ಮಹಡಿಯಲ್ಲಿ ಉಪಾಹಾರ ಮಂದಿರಕ್ಕೆ ಒಟ್ಟು ವಿಸ್ತೀರ್ಣ 2623 ಚದರ ಅಡಿ ಸ್ಥಳಾವಕಾಶ ಒದಗಿಸಲಾಗಿದೆ. ಉಪಾಹಾರ ಮಂದಿರದಲ್ಲಿ ಅಡುಗೆ ಮಾಡಲು ಅವಕಾಶ ಇರುವುದಿಲ್ಲ. ತಿಂಡಿ ಪದಾರ್ಥಗಳನ್ನು ಬೇರೆ ಕಡೆ ತಯಾರಿಸಿ ಈ ಉಪಾಹಾರ ಮಂದಿರದಲ್ಲಿ ಮಾರಾಟ ಮಾಡಲು ಅವಕಾಶ

ಕಲ್ಪಿಸಲಾಗಿದೆ. ಟೆಂಡರ್‌ದಾರರು ಕಚೇರಿ ವೇಳೆಯಲ್ಲಿ ವಿಕಾಸಸೌಧ ಕಟ್ಟಡದ ಉಪಾಹಾರ ಮಂದಿರದ ಸ್ಥಳದ ಪರಿವೀಕ್ಷಣೆ ಮಾಡಬಹುದು.

3) ಉಪಾಹಾರ ಮಂದಿರವನ್ನು ನಡೆಸಲು ಟೆಂಡರ್ ಸಲ್ಲಿಸುವವರು ರೂ. ಒಂದು ಲಕ್ಷ ಮುಂಗಡ ಠೇವಣಿ (ಇ.ಎಂ.ಡಿ.) ಹಣಕ್ಕೆ ಬ್ಯಾಂಕ್ ಡ್ರಾಫ್ಟ್‌ನ್ನು "ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಲೆಕ್ಕಪತ್ರ), ಬೆಂಗಳೂರು" ಇವರ ಹೆಸರಿನಲ್ಲಿ ಪಡೆದು ಸಲ್ಲಿಸತಕ್ಕದ್ದು.

4) ಮುಂಗಡ ಠೇವಣಿ ಹಣದ ಸಂಬಂಧ ಬ್ಯಾಂಕ್ ಡ್ರಾಫ್ಟನ್ನು ಟೆಂಡರ್ ಜೊತೆಗೆ ಸಲ್ಲಿಸದಿದ್ದಲ್ಲಿ, ನೀಡಿರುವ ಟೆಂಡರನ್ನು ತಿರಸ್ಕರಿಸಲಾಗುವುದು

5) ಸದರಿ ಟೆಂಡರ್‌ಗಳ ಮೇಲೆ "ಕರ್ನಾಟಕ ಸರ್ಕಾರ ಸಚಿವಾಲಯದ ವಿಕಾಸಸೌಧ ಉಪಾಹಾರ ಮಂದಿರ ನಡೆಸಲು ಟೆಂಡರ್" ಎಂದು ನಮೂದಿಸಿರತಕ್ಕದ್ದು

6) ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕಃ 19-6-2006ರ ಮಧ್ಯಾಹ್ನ 3-00 ಗಂಟೆ ಒಳಗೆ. **ಮೊಹರು ಮಾಡಿದ ಲಕೋಟೆಗಳಲ್ಲಿ** ಟೆಂಡರನ್ನು ಉಪ ಕಾರ್ಯದರ್ಶಿ, ಸಿಆಸುಇ (ಕಾರ್ಯಕಾರಿ), ಕೊಠಡಿ ಸಂಖ್ಯೆಃ 23, ವಿಧಾನಸೌಧ, ಬೆಂಗಳೂರು, ಇವರಿಗೆ ಸಲ್ಲಿಸತಕ್ಕದ್ದು.

7) ಅದೇ ದಿನ ಮಧ್ಯಾಹ್ನ 4-00 ಗಂಟೆಗೆ ಸರಿಯಾಗಿ ಪ್ರಧಾನ ಕಾರ್ಯದರ್ಶಿ, ಸಿಆಸುಇ (ಆಡಳಿತ ಸುಧಾರಣೆ), ಇವರ ಕೊಠಡಿಯಲ್ಲಿ (ಕೊಠಡಿ ಸಂಖ್ಯೆಃ 2, ಒಂದನೇ ಮಹಡಿ, ಬಹು ಮಹಡಿ ಕಟ್ಟಡ 5ನೇ ಹಂತ) ಟೆಂಡರ್‌ಗಳನ್ನು ತೆರೆಯಲಾಗುವುದು. ಟೆಂಡರ್‌ಗಳನ್ನು ತೆರೆಯುವ ಸಮಯದಲ್ಲಿ ಟೆಂಡರ್‌ದಾರರು ಅಥವಾ ಅವರ ಅಧಿಕೃತ ಪ್ರತಿನಿಧಿ ಹಾಜರಿರಬಹುದು.

8) ಈ ಉಪಾಹಾರ ಮಂದಿರವನ್ನು ಆದೇಶ ಹೊರಡಿಸಿದ ದಿನಾಂಕದಿಂದ 1 (ಒಂದು) ವರ್ಷದ ಅವಧಿಗೆ ನಡೆಸಲು ಅನುಮತಿ ನೀಡಲಾಗುವುದು. ಯಾವುದೇ ಹಂತದಲ್ಲೂ 30 ದಿನಗಳ ನೋಟೀಸ್ ನೀಡುವ ಮೂಲಕ ಗುತ್ತಿಗೆಯನ್ನು ರದ್ದುಗೊಳಿಸುವ ಅಧಿಕಾರವನ್ನು ಸರ್ಕಾರ ಹೊಂದಿರುತ್ತದೆ.

9) ಟೆಂಡರ್‌ದಾರರು ತಮ್ಮ ಟೆಂಡರ್‌ಗಳಿಗೆ ಪೂರ್ಣ ಹೆಸರಿನೊಂದಿಗೆ ಸಹಿ ಹಾಕಿರಬೇಕು. ಅದು ಒಂದು ಸಂಸ್ಥೆಯ ಪರವಾಗಿ ಹಾಕಿದ್ದಲ್ಲಿ, ವ್ಯವಸ್ಥಾಪಕ ಪಾಲುದಾರನ ಹೆಸರಿನೊಂದಿಗೆ ಸಹಿ ಹಾಕಿರಬೇಕು

10) ಪ್ರತಿಯೊಬ್ಬ ಟೆಂಡರುದಾರನು ತನ್ನ ವಾಸ ಸ್ಥಳ, ಅಂಚೆ ವಿಳಾಸ ಹಾಗೂ ದೂರವಾಣಿ ಸಂಖ್ಯೆ ಯನ್ನು ಸ್ಪಷ್ಟವಾಗಿ ಟೆಂಡರ್‌ನಲ್ಲಿ ನಮೂದಿಸತಕ್ಕದ್ದು

11) ಅಯಶಸ್ವಿ ಟೆಂಡರ್‌ದಾರರ ಮುಂಗಡ ಠೇವಣಿ ಹಣವನ್ನು ಬಡ್ಡಿರಹಿತವಾಗಿ ಹಿಂದಿರುಗಿಸಲಾಗುವುದು

12) ಯಶಸ್ವಿ ಟೆಂಡರ್‌ದಾರರ ಮುಂಗಡ ಹಣವನ್ನು ಭದ್ರತಾ ಠೇವಣಿಯನ್ನಾಗಿ ಪರಿಗಣಿಸಿ ಸರ್ಕಾರಿ ಲೆಕ್ಕಕ್ಕೆ ಜಮಾ ಮಾಡಲಾಗುವುದು. ಟೆಂಡರ್ ಅವಧಿ ಮುಗಿದ ನಂತರ ಸರ್ಕಾರಕ್ಕೆ ಟೆಂಡರುದಾರರಿಂದ ಯಾವುದೇ ಬಾಕಿ ಇಲ್ಲದಿದ್ದಲ್ಲಿ, ಭದ್ರತಾ ಠೇವಣಿಯನ್ನು ಬಡ್ಡಿರಹಿತವಾಗಿ ಹಿಂದಿರುಗಿಸಲಾಗುವುದು.

13) ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿಗೆ ಸಂಬಂಧಿಸಿದಂತೆ, ಈ ಕೆಳಗಿನ ತಿಂಡಿ-ತಿನಿಸು, ಕಾಫಿ-ಟೀ ಇತ್ಯಾದಿಗಳಿಗೆ ಅವುಗಳ ಮುಂದೆ ನಿಗದಿಪಡಿಸಿರುವ ಪ್ರಮಾಣ ಮತ್ತು ದರದಲ್ಲಿ ಒದಗಿಸತಕ್ಕದ್ದು;

| ಕ್ರಮ ಸಂಖ್ಯೆ | ಕಾಫಿ, ಟೀ, ತಿಂಡಿ ಇತ್ಯಾದಿಗಳ ಹೆಸರು | ಪ್ರಮಾಣ | ದರ ರೂ. |
|---|---|---|---|
| 01 | ಇಡ್ಲಿ | 75 gm. | 2/- ಒಂದಕ್ಕೆ |
| 02 | ವಡೆ | 100 gm | 4/- ಒಂದಕ್ಕೆ |
| 03 | ಉದ್ದಿನ ವಡೆ | 100gm | 4/- ಒಂದಕ್ಕೆ |
| 04 | ಖಾರಾ ಬಾತ್ | 100gm | 3.50 |
| 05 | ಚೌಚೌ ಬಾತ್ | 200gm | 7/- |
| 06 | ಪಕೋಡ | 100gm | 6/- |
| 07 | ರೈಸ್ ಬಾತ್ | 300gm | 5/- |
| 08 | ರೈಸ್ ಸಾಂಬಾರ್ | 325gm | 5/- |
| 09 | ಮಸಾಲಾ ದೋಸಾ | 250gm | 7/- |
| 10 | ಸೆಟ್ ದೋಸಾ | 250gm | 7/- |
| 11 | ಪೂರಿ | 250gm | 7/- |
| 12 | ಕಾಫಿ / ಟೀ | 100 ಔನ್ಸ್ | 3/- |

| ಕ್ರಮ ಸಂಖ್ಯೆ | ಕಾಫಿ, ಟೀ, ತಿಂಡಿ ಇತ್ಯಾದಿಗಳ ಹೆಸರು | ಪ್ರಮಾಣ | ದರ ರೂ. |
|---|---|---|---|
| 13 | ಬೋಂಡಾ | 100gm | 6/- |
| 14 | ಲಂಚ್ (ಅನ್ನ, ಸಾಂಬಾರ್, ರಸಮ್, ಮೊಸರು, ಪಲ್ಯ, ಚಪಾತಿ/ಪೂರಿ/ರಾಗಿ ಮುದ್ದೆ) | 500 gm | 14/- |
| 15 | ರವೆ ಇಡ್ಲಿ | 125 gm | 7/- ಒಂದಕ್ಕೆ |
| 16 | ಮಸಾಲೆ ವಡೆ | 150 gm | 6/- ಎರಡಕ್ಕೆ |

14) ಈ ಉಪಾಹಾರ ಮಂದಿರಕ್ಕೆ ಕನಿಷ್ಠ ಮಾಸಿಕ ರೂ. 12,000/- ಬಾಡಿಗೆಯನ್ನು ನಿಗದಿಪಡಿಸಲಾಗಿದೆ. ಅದಕ್ಕಿಂತ ಕಡಿಮೆ ಬಾಡಿಗೆ ನಮೂದಿಸಿದಲ್ಲಿ ಟೆಂಡರ್‌ಗಳನ್ನು ಪರಿಗಣಿಸಲಾಗುವುದಿಲ್ಲ

15) ಯಶಸ್ವಿ ಟೆಂಡರ್‌ದಾರರು ಬೆಂಗಳೂರು ಮಹಾನಗರ ಪಾಲಿಕೆ, ಕಾರ್ಮಿಕ ಇಲಾಖೆ ಮತ್ತು ಇತರ ಸಂಬಂಧಪಟ್ಟ ಸರ್ಕಾರಿ ಇಲಾಖೆಗಳು / ಸಂಸ್ಥೆಗಳಿಂದ ಉಪಾಹಾರ ಮಂದಿರವನ್ನು ನಡೆಸಲು ಪರವಾನಗಿ ಪತ್ರ ಹಾಗೂ ನಿರಾಪೇಕ್ಷಣಾ ಪತ್ರ (No objection certificate) ಇತ್ಯಾದಿ ಅವಶ್ಯಕ ದಾಖಲೆಗಳನ್ನು ಲಗತ್ತಿಸಿರತಕ್ಕದ್ದು.

16) ಗೊತ್ತುಪಡಿಸಿದ ಅರ್ಜಿ ನಮೂನೆಯಲ್ಲಿ ಹಾಗೂ ನಿಗದಿತ ದಿನಾಂಕ ಮತ್ತು ಸಮಯದೊಳಗೆ ಸಲ್ಲಿಸದೇ ಇರುವ ಟೆಂಡರನ್ನು ತಿರಸ್ಕರಿಸಲಾಗುವುದು

17) ದಿನಾಂಕಃ 14-6-2006ರ ಮಧ್ಯಾಹ್ನ 3-00 ಗಂಟೆಯವರೆಗೆ ಮಾತ್ರ ಈ ಟೆಂಡರ್ ನಮೂನೆಯನ್ನು ಮಾರಾಟ ಮಾಡಲಾಗುವುದು.

18) ಗೊತ್ತುಪಡಿಸಿದ ನಮೂನೆಯ ನಿಗದಿತ ಪಟ್ಟಿಯಲ್ಲಿನ ಯಾವುದೇ ಮಾರ್ಪಾಡುಗಳನ್ನು ಮಾಡಿರುವ ಟೆಂಡರುಗಳನ್ನು ತಿರಸ್ಕರಿಸಲಾಗುವುದು.

19) ಯಶಸ್ವಿ ಟೆಂಡರ್‌ದಾರರು ಕರಾರು ಒಪ್ಪಂದ ಪತ್ರವನ್ನು ಆದೇಶ ಹೊರಡಿಸಿದ ದಿನಾಂಕದಿಂದ ಒಂದು ವಾರದೊಳಗೆ ನಿಗದಿತ ಮೌಲ್ಯದ ಛಾಪಾ ಕಾಗದದಲ್ಲಿ ಸಹಿ ಹಾಕಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು. ಈ ಅವಧಿಯೊಳಗೆ ನಿಗದಿತ ಕರಾರು ಒಪ್ಪಂದ ಪತ್ರಕ್ಕೆ ಸಹಿ ಹಾಕಿ ಸಲ್ಲಿಸಲು ವಿಫಲರಾದಲ್ಲಿ, ಅವರಿಗೆ ನೀಡಲಿದ್ದ ಗುತ್ತಿಗೆಯನ್ನು ರದ್ದುಗೊಳಿಸಿ, ಅವರು ಸಲ್ಲಿಸಿರುವ ಮುಂಗಡ ಠೇವಣಿ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು

20) ಐದು ವರ್ಷಗಳ ಕಾಲ ಪ್ರಾಮುಖ್ಯತೆ ಪಡೆದಿರುವ ಉಪಾಹಾರ ಮಂದಿರವನ್ನು ನಡೆಸಿರುವ ಅನುಭವ ಇದ್ದು, ಆದಾಯ ತೆರಿಗೆ ಮತ್ತು ಮಾರಾಟ ತೆರಿಗೆ ಪಾವತಿ ಮಾಡಿರುವಂತಹ ವ್ಯಕ್ತಿಗಳು ಹಾಗೂ ಸಂಸ್ಥೆಗಳು ಮಾತ್ರ ಟೆಂಡರ್‌ನಲ್ಲಿ ಭಾಗವಹಿಸಬಹುದು. ಈ ಬಗ್ಗೆ ಟೆಂಡರ್‌ದಾರರು ದಾಖಲೆಗಳೊಂದಿಗೆ ಸಂಪೂರ್ಣ ವಿವರ ನೀಡುವುದು.

21) ಉಪಾಹಾರ ಮಂದಿರವನ್ನು ನಡೆಸುವ ಸ್ಥಳವನ್ನು ಸ್ವಚ್ಛವಾಗಿ ಇಡುವುದಲ್ಲದೇ, ಸೋಂಕು ರೋಗ, ಇಲಿ, ನೊಣ, ಸೊಳ್ಳೆ ಇತ್ಯಾದಿ ಸಮಸ್ಯೆಗಳು ಉಂಟಾಗದಂತೆ ದಿನಂಪ್ರತಿ ಔಷಧಿಯನ್ನು ಸಿಂಪಡಿಸತಕ್ಕದ್ದು.

22) ಈ ಉಪಾಹಾರ ಮಂದಿರಗಳಲ್ಲಿ ಆರೋಗ್ಯಕರವಾದ ಮತ್ತು ಶುಚಿ-ರುಚಿಯಾದ ತಿಂಡಿ-ತಿನಿಸುಗಳನ್ನು ಮಾತ್ರ ಒದಗಿಸತಕ್ಕದ್ದು.

23) ಇಲ್ಲಿ ನೀಡುವ ತಿಂಡಿ-ತಿನಿಸು, ಆಹಾರ ಪದಾರ್ಥಗಳನ್ನು ತಿಂದು ಗ್ರಾಹಕರು ಅಸ್ವಸ್ಥರಾದರೆ, ಅದರಿಂದ ಉಂಟಾಗುವ ಪರಿಣಾಮಗಳಿಗೆ ಉಪಾಹಾರ ಮಂದಿರದ ಗುತ್ತಿಗೆದಾರರೇ ಸಂಪೂರ್ಣ ಜವಾಬ್ದಾರರು.

24) ಉಪಾಹಾರ ಮಂದಿರ ಮತ್ತು ಅದರ ಆವರಣದಲ್ಲಿ ಇನ್ನಾವುದೇ ವಾಣಿಜ್ಯ ಚಟುವಟಿಕೆಗಳನ್ನು ನಡೆಸುವಂತಿಲ್ಲ.

25) ಈ ಉಪಾಹಾರ ಮಂದಿರವನ್ನು ಕಚೇರಿ ಕೆಲಸದ ದಿನಗಳಲ್ಲಿ ಬೆಳಿಗ್ಗೆ 9-00 ಗಂಟೆಯಿಂದ ಸಂಜೆ 6-30 ಗಂಟೆಯವರೆಗೆ ಮಾತ್ರ ನಡೆಸತಕ್ಕದ್ದು ಮತ್ತು ಸಾರ್ವಜನಿಕ ರಜಾ ದಿನಗಳಲ್ಲಿ ಈ ಉಪಾಹಾರ ಮಂದಿರವನ್ನು ನಡೆಸುವಂತಿಲ್ಲ. ಈ ಉಪಾಹಾರ ಮಂದಿರದಲ್ಲಿ ನಿಗದಿತ ವೇಳೆಯ ನಂತರ ಯಾವುದೇ ಸಿಬ್ಬಂದಿ/ನೌಕರರು ಇರುವಂತಿಲ್ಲ. ಈ ಉಪಾಹಾರ ಮಂದಿರವು ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅಧಿಕಾರಿ/ಸಿಬ್ಬಂದಿಗಳ ಉಪಯೋಗಕ್ಕಾಗಿ ಮಾತ್ರ ಉದ್ದೇಶಿಸಲಾಗಿರುತ್ತದೆ.

26) ಯಾವುದೇ ವ್ಯಾಜ್ಯ ಉಂಟಾದಲ್ಲಿ, ಅದನ್ನು ಬೆಂಗಳೂರು ನಗರ ವ್ಯಾಪ್ತಿಯಲ್ಲಿನ ನ್ಯಾಯಾಲಯಗಳಿಗೆ ಮಾತ್ರ ಸೀಮಿತಗೊಂಡಂತೆ ಬಗೆಹರಿಸಿಕೊಳ್ಳತಕ್ಕದ್ದು.

27) ಯಾವುದೇ ಕಾರಣವನ್ನು ನೀಡದೆ, ಯಾವುದೇ ಅಥವಾ ಎಲ್ಲಾ ಟೆಂಡರುಗಳನ್ನು ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಟೆಂಡರ್ ಅಂಗೀಕರಿಸುವ ಸಕ್ಷಮ ಅಧಿಕಾರಿಯವರು ಕಾಯ್ದಿರಿಸಿಕೊಂಡಿದ್ದಾರೆ. ಇವರ ನಿರ್ಣಯವೇ ಅಂತಿಮವಾದದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಕೆ. ರವಿಮೂರ್ತಿ**

ಪಿ.ಆರ್. 337

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ-1)